# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*

Vol - 12 | December 2014 | Issue No. 11 | ₹ 10.00/-





ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಭದ್ರ ಬುನಾದಿ ಹಾಕಿದ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ ಆಚರಣೆಗೆ ದಿನಾಂಕ 11-12-2014ರಂದು ಶಾಂತಿಗೃಹದ ಸಭಾಭವನದಲ್ಲಿ ಚಾಲನೆ ನೀಡಿದ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಡಾ. ಸಾ.ಶಿ. ಮರುಳಯ್ಯರವರು ಮಾತನಾಡುತ್ತಿರುವುದು. ಮಾಜಿ ಕೇಂದ್ರ ಸಚಿವ ಶ್ರೀ ಎಂ.ವಿ. ರಾಜಶೇಖರನ್ ಡಾ. ರಮೇಶ್ ಕಾಮತ್, ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಸಂಸ್ಥೆ ಉಪಾಧ್ಯಕ್ಷರುಗಳಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಶ್ರೀ ಟಿ.ಎಸ್. ಲೂಕಾಸ್, ರಾಜ್ಯ ಆಯುಕ್ತರುಗಳಾದ ಶ್ರೀ ಎಂ.ಎ. ಖಾಲಿದ್, ಶ್ರೀಮತಿ ಗೀತಾ ನಟರಾಜ್ ಹಾಗೂ ರಾಜ್ಯ ಕೋಶಾಧಿಕಾರಿ ಶ್ರೀ ಪ್ರಭುದೇವ ಜೆ. ಚಿಗಟೇರಿರವನ್ನು ಚಿತ್ರದಲ್ಲಿ ಕಾಣಬಹುದು.

ದಿನಾಂಕ 21-12-2014ರಂದು ಕೋಲಾರ ಜಿಲ್ಲೆಯ ಅವಣಿಯಲ್ಲಿ ಜರುಗಿದ ರಾಜ್ಯ ಮಟ್ಟದ ರೋವರ್ಸ್-ರೇಂಜರ್ಸ್ ಚಾರಣ ಶಿಬಿರವನ್ನು ಶ್ರೀ ಕೆ.ಹೆಚ್. ಮುನಿಯಪ್ಪ, ಮಾಜಿ ಕೇಂದ್ರ ಸಚಿವರು ಉದ್ಘಾಟಿಸುತ್ತಿರುವುದು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯಸಭಾ ಸದಸ್ಯ ಶ್ರೀ ರಾಜೀವ್ ಗೌಡ ಹಾಗೂ ಇತರರನ್ನು ಕಾಣಬಹುದು.



# Office Bearers and the Members of The Bharat Scouts and Guides, Karnataka, Salute Two Eminent personalities who were conferred with the Highest Award of "Bharatha Rathna" by Government of India






**Pandit Madan Mohan Malaviya**
who was Instrumental in Introducing Scouting Activities for Indian Boys by Starting Seva Samithi Scout Association Way back in 1919



**Sri Atal Bihari Vajapayee**
Former Prime Minister of India

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ
# Karnataka Scout & Guide News Magazine

Monthly, Published by
**The Bharat Scouts & Guides, Karnataka**
State Headquarters, Shanthigruha,
# 39, Palace Road, Bangalore-560 001
Tel : 080-2226 0017, 2226 7470



## ಪರಿವಿಡಿ



**ಸಂಚಿಕೆಯ ವಾರ್ಷಿಕ ಚಂದಾ ರೂ. 100/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**
ಚಂದಾಹಣವನ್ನು
ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ,
# 39, ಅರಮನೆ ರಸ್ತೆ, ಬೆಂಗಳೂರು-560 001
ದೂ: 080-2226 0017, 2226 7470
ಇಲ್ಲಿಗೆ ಕಳುಹಿಸಲು ಕೋರಿದೆ.

ನಮ್ಮ ಸಂಸ್ಥೆಯ ವೆಬ್‌ಸೈಟ್ ಹಾಗು ಫೇಸ್‌ಬುಕ್ ಚಾಲನೆಯಲ್ಲಿದೆ : ಸಂಪರ್ಕಿಸಿ

**www.bsgkarnataka.org**
**www.kondajjibasappa.org**
**Face book ground Link**
**: BSGKJamborette2015**

## ರಾಜ್ಯ ಮುಖ್ಯ ಆಯುಕ್ತರ ನುಡಿ..........................

ಚಳವಳಿಯಲ್ಲಿ ಸಕ್ರಿಯವಾಗಿ ಕಾರ್ಯನಿರ್ವಹಿಸುತ್ತಿರುವ ಎಲ್ಲ ಕಾರ್ಯಕರ್ತರುಗಳಿಗೆ, ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್, ದಳ ನಾಯಕ-ನಾಯಕಿಯರುಗಳಿಗೆ, ಪೋಷಕರುಗಳಿಗೆ, ಸಂಸ್ಥೆಯ ಅಭಿಮಾನಿಗಳಿಗೆ 2015ರ ಹಾರ್ದಿಕ ಶುಭಾಶಯಗಳು.

ಪ್ರಿಯ ಓದುಗ ಮಿತ್ರರೆ,

ಮನುಷ್ಯ ತನ್ನ ಬದುಕಿನಲ್ಲಿ ಅದೆಷ್ಟು ಸಾರ್ಥಕವಾಗಿಸಿಕೊಂಡು ಬದುಕಬಹುದು ಎಂಬುದಕ್ಕೆ ಅನೇಕ ವ್ಯಕ್ತಿಗಳ ಉದಾಹರಣೆ ನೀಡಬಹುದು. ತನಗಿರುವ ಅಧಿಕಾರದಿಂದ, ತನ್ನದೇ ಪರಿಸರದಲ್ಲಿ ತನ್ನ ಹೆಜ್ಜೆಗುರುತುಗಳನ್ನು ಸಾಧಕನಾಗಿ ಮೂಡಿಸಬಹುದು ಎಂಬುದಕ್ಕೆ ಕೊಂಡಜ್ಜಿ ಬಸಪ್ಪನವರ ಬದುಕು ಸ್ಮರಣೀಯ ಎನಿಸುತ್ತಿದೆ.

ಇದನ್ನು ಹೇಳುತ್ತಿರುವುದಕ್ಕೆ ಒಂದು ಕಾರಣವಿದೆ. ಮಾಜಿಮಂತ್ರಿ ದಿವಂಗತ ಕೊಂಡಜ್ಜಿ ಬಸಪ್ಪನವರು ಮುನ್ನಡೆಸಿದ ಸ್ಕೌಟ್ ಹಾಗೂ ಗೈಡ್ ಸಂಸ್ಥೆಯ ಮುಖ್ಯ ಆಯುಕ್ತರಾಗಿ ಕಳೆದ ಮೂರು-ನಾಲ್ಕು ತಿಂಗಳಿಂದ ಇದು ನನ್ನ ಅನುಭವಕ್ಕೆ ಬರುತ್ತಿದೆ. ಶಿಕ್ಷಣ ತಜ್ಞರಾಗಿ, ಸಹಕಾರಿ ತತ್ವದ ಮುಖವಾಣಿಯಾಗಿ, ಸಮರ್ಥ ಜನಪ್ರತಿನಿಧಿ ಹಾಗೂ ಸಚಿವರಾಗಿ ಬಸಪ್ಪನವರು ಕೇವಲ ತಮ್ಮ ವ್ಯಕ್ತಿಗತ ಕುಟುಂಬದ ಆಸ್ತಿಯಾಗುವುದಕ್ಕಿಂತ, ಸಾರ್ವಜನಿಕ ಜನಜೀವನ ಹಸನು ಮಾಡುವ ಕೌಶಲ್ಯಹೊಂದಿದ್ದರು. ಅವರು ತಮ್ಮ ಕುಟುಂಬ ಪೋಷಣೆಗಾಗಿ ಕೇವಲ ವಕೀಲ ವೃತ್ತಿಯಲ್ಲಿ ಅಥವಾ ರೈತರಾಗಿ ಇದ್ದು ಬಿಡಬಹುದಿತ್ತು. ಆದರೆ, ಅವರ ವ್ಯಕ್ತಿತ್ವದಲ್ಲಿ ಸಮಾಜಮುಖೀ ಮನಸ್ಸಿನ ತುಡಿತ ಚುನಾಯಿತ ಜನಪ್ರತಿನಿಧಿಯನ್ನಾಗಿಸಿತು. ಈ ಮೂಲಕ ಜನರ ಸೇವೆಗಾಗಿ ತಮ್ಮನ್ನು ತೊಡಗಿಸಿಕೊಂಡರು. ಶಾಲಾ ಮಕ್ಕಳನ್ನು ಭವಿಷ್ಯದ ಪ್ರಜೆಗಳನ್ನಾಗಿಸಲು ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆಯ ಚುಕ್ಕಾಣಿ ಹಿಡಿದು ನಾಡಿನ ಉದ್ದಗಲಕ್ಕೂ ಭಾರತ್ ಸ್ಕೌಟ್ಸ್ ಸಂಘಟಿಸಿ ಯಶಸ್ವಿಯಾದರು.

ಡಿಸೆಂಬರ್ 11ಕ್ಕೆ ಬಸಪ್ಪನವರು ಬದುಕಿದ್ದರೆ ನೂರು ವರ್ಷವಾಗಿರುತ್ತಿತ್ತು. ಆದರೆ, 1982 ನವೆಂಬರ್ 14 ರಂದು ತಮ್ಮ 67ನೇ ವಯಸ್ಸಿಗೆ ನಿಧನರಾದರು. ಇದು ನಾಡಿನ ದೌರ್ಭಾಗ್ಯ. ಬಸಪ್ಪನವರನ್ನು ಮಾಜಿ ಮುಖ್ಯಮಂತ್ರಿ ದಿವಂಗತ ಎಸ್. ನಿಜಲಿಂಗಪ್ಪ ಸ್ಮರಿಸುವುದು ಹೀಗೆ "ನನ್ನ ಸರ್ಕಾರದಲ್ಲಿ ಕೊಂಡಜ್ಜಿ ಉಪಮಂತ್ರಿಯಾಗಿದ್ದರು, ತಮಗೆ ವಹಿಸಿದ ಕೆಲಸಗಳನ್ನು ಅಚ್ಚುಕಟ್ಟಾಗಿ, ಸಮರ್ಪಕವಾಗಿ, ಯಾರ ಹಂಗಿಗೂ ಒಳಪಡದೆ, ಆಕ್ಷೇಪಣೆಗಳಿಗೂ ಗುರಿಯಾಗದೆ ನಿರ್ವಹಿಸಿದರು". ಇದೇ ರೀತಿ ಇನ್ನೊಬ್ಬ ಮಾಜಿ ಮುಖ್ಯಮಂತ್ರಿ ದಿವಂಗತ ರಾಮಕೃಷ್ಣ ಹೆಗಡೆ ಹೇಳುತ್ತಾರೆ "ಬಸಪ್ಪನವರು ಮರಳುಗಾಡಿನಲ್ಲಿ ಓಯಸಿಸ್" ಇದ್ದಂತೆ. ಮತ್ತೊಬ್ಬ ಮಾಜಿ ಮುಖ್ಯ ಮಂತ್ರಿ ದಿವಂಗತ ಕೆಂಗಲ್ ಹನುಮಂತಯ್ಯ ಅಭಿಪ್ರಾಯ ಹೀಗಿದೆ "ಕೊಂಡಜ್ಜಿ ಜೀವನ ಸೇವಾಮಯವಾದ್ದು, ಅವರ ರಾಜಕೀಯ ಜೀವನ ಶುದ್ಧವಾದದ್ದು".

ನಾನಿಲ್ಲಿ ಸ್ಮರಿಸುತ್ತಿರುವ ಹಿರಿಯ ಚೇತನಗಳ ಸಾರ್ಥಕ ಬದುಕು ಸಾಧನೆ ಅವರ ಜೀವನದಲ್ಲಿ ಸ್ಮರಣೀಯ ಎನಿಸುತ್ತಿದೆ. ಬೆಂಗಳೂರಿನ ಕೇಂದ್ರ ಕಛೇರಿಯ ಶಾಂತಿಗೃಹದ ಸಭಾಂಗಣದಲ್ಲಿ ನಡೆದ ಕೊಂಡಜ್ಜಿ ಬಸಪ್ಪನವರ

ಜನ್ಮಶತಮಾನೋತ್ಸವ ಆಚರಣೆಯ ದಿನ ಇದೆಲ್ಲಾ ನೆನಪಾಯಿತು. ಕಾರ್ಯಕ್ರಮ ಯಶಸ್ವಿಯಾಗಿ ನಡೆದು ಮಾಜಿ ಕೇಂದ್ರ ಸಚಿವರಾದ ಶ್ರೀ ಎಂ.ವಿ.ರಾಜಶೇಖರನ್, ಕನ್ನಡ ಸಾಹಿತ್ಯ ಪರಿಷತ್‌ನ ಮಾಜಿ ಅಧ್ಯಕ್ಷರಾದ ಶ್ರೀ ಸಾ.ಶಿ. ಮರುಳಯ್ಯ ಅವರು ಬಸಪ್ಪನವರ ಬಗ್ಗೆ ಸ್ತುತ್ಯಾರ್ಹ ಮಾತುಗಳನ್ನಾಡಿದರು. ಡಾ॥ ರಮೇಶ್ ಕಾಮತ್ ತಮ್ಮ ಆಕರ್ಷಕ ಮಾತು ಮತ್ತು ಮ್ಯಾಜಿಕ್‌ಗಳಿಂದ ಕೊಂಡಜ್ಜಿ ಬಸಪ್ಪನವರ ವ್ಯಕ್ತಿತ್ವವನ್ನು ಮಕ್ಕಳಿಗೆ ಅರ್ಥವಾಗುವಂತೆ ಬಣ್ಣಿಸಿದರು. ಇವರೆಲ್ಲರಿಗೂ ಸಂಸ್ಥೆಯ ಪರವಾಗಿ ಕೃತಜ್ಞತೆಗಳು.

ಈಗಾಗಲೇ ಚಿತ್ರದುರ್ಗ, ಶಿವಮೊಗ್ಗ, ದಾವಣಗೆರೆ, ಗುಲ್ಬರ್ಗ, ಗದಗ್ ಹಾಗೂ ಹಾವೇರಿ ಜಿಲ್ಲೆಗಳಿಗೆ ಭೇಟಿ ನೀಡಿ ಅಲ್ಲಿನ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಶಿಬಿರಗಳಿಗೆ ಭೇಟಿ ನೀಡಿದ್ದೇನೆ. ಇತ್ತೀಚೆಗೆ ಕೋಲಾರ ಜಿಲ್ಲೆಯ ಅವನಿಯಲ್ಲಿ ನಡೆದ ರೋವರ್ಸ್ & ರೇಂಜರ್ಸ್ ಚಾರಣ ಶಿಬಿರದಲ್ಲಿ ಭಾಗವಹಿಸಿದ್ದೆ. ಮಾನ್ಯ ಸಂಸತ್ ಸದಸ್ಯರಾಗಿರುವ ಶ್ರೀ ಕೆ.ಹೆಚ್. ಮುನಿಯಪ್ಪ ಹಾಗೂ ಪ್ರೊ. ಎಂ.ವಿ. ರಾಜೀವ ಗೌಡ ಅವರುಗಳು ಸಮಾರಂಭದಲ್ಲಿ ಭಾಗವಹಿಸಿದ್ದರು. ನನ್ನ ಪ್ರವಾಸದುದ್ದಕ್ಕೂ, ಒಂದಲ್ಲಾ ಒಂದು ರೀತಿಯಲ್ಲಿ ಸ್ಕೌಟ್ಸ್ ಹಾಗೂ ಗೈಡ್ ಚಳವಳಿಗೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಭಾಗಿಯಾಗಿರುವವರ ಭೇಟಿ ಆಗುತ್ತಲೇ ಇರುತ್ತದೆ. ಇದೊಂದು ಸಂತೋಷದ ಸಂಗತಿ.

2014ರ ವರ್ಷವನ್ನು ಕೊಂಡಜ್ಜಿ ಬಸಪ್ಪನವರ ವ್ಯಕ್ತಿತ್ವ ಸ್ಮರಿಸುವ ಕಾರ್ಯಕ್ರಮದೊಂದಿಗೆ ಬೀಳ್ಕೊಡುತ್ತಿದ್ದೇವೆ. ಹಾಗೆಯೇ 2015ರ ವರ್ಷವನ್ನು "ಜಾಂಬೋರೇಟ್-15" ಸಿದ್ಧತಾ ಕಾರ್ಯಕ್ರಮದ ಬಿಡುವಿಲ್ಲದ ಸಭೆಗಳ ಮೂಲಕ ಅರ್ಥಪೂರ್ಣವಾಗಿ ಆಹ್ವಾನಿಸುತ್ತಿದ್ದೇನೆ. ನಾವು ಹೊಸ ವರ್ಷದಲ್ಲಿ ದೊಡ್ಡಬಳ್ಳಾಪುರದ ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಹಾಗೂ ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ "ಜಾಂಬೋರೇಟ್-15" ಸಮಾವೇಶದಲ್ಲಿ ಭೇಟಿಯಾಗೋಣ.

ಸ್ಕೌಟ್-ಗೈಡ್ ಹಾರ್ದಿಕ ಶುಭಾಶಯಗಳೊಂದಿಗೆ

ತಮ್ಮ ವಿಶ್ವಾಸಿ

ಪಿ.ಜಿ.ಆರ್. ಸಿಂಧ್ಯ
ರಾಜ್ಯ ಮುಖ್ಯ ಆಯುಕ್ತರು

## "ದಯವಿಟ್ಟು ಗಮನಿಸಿರಿ"

ದಿನಾಂಕ : 17 ರಿಂದ 23 ಜನವರಿ 2015 ರ ವರೆಗೆ ಡಾ. ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿ ಜರುಗುವ 27ನೇ ಕರ್ನಾಟಕ ರಾಜ್ಯ ಜಾಂಬೋರೇಟ್‌ನಲ್ಲಿ ತಮ್ಮ ಜಿಲ್ಲೆಗಳಿಗೆ ನೀಡಿದ ಕೋಟಾ ಪ್ರಕಾರ ತಪ್ಪದೇ ಭಾಗವಹಿಸಲು ಕೋರಿಕೆ.

ರಾಜ್ಯ ಕಾರ್ಯದರ್ಶಿ

# ರಾಜ್ಯ ಕಾರ್ಯದರ್ಶಿಗಳ ನುಡಿ.........................

ಪ್ರಿಯರೆ,

ಇಡೀ ನಾಡು ಕ್ರಿಸ್‌ಮಸ್ ಸಂಭ್ರಮದಲ್ಲಿದೆ. ಈ ಸಂಭ್ರಮದ ಜೊತೆಗೆ ನಮ್ಮ ಸ್ಕೌಟ್ ಹಾಗೂ ಗೈಡ್ ಸಂಸ್ಥೆಯಲ್ಲಿ ನೂತನ ವರ್ಷಾಚರಣೆಯನ್ನು "ಜಾಂಬೋರೇಟ್-2015" ಸಂಘಟಿಸುವ ಉತ್ಸಾಹದೊಂದಿಗೆ ಇಮ್ಮುಡಿಯಾಗುತ್ತಿದೆ.

Jamboree ಎಂಬ ಇಂಗ್ಲೀಷ್ ಪದಕ್ಕೆ ನಮ್ಮ ಪದಕೋಶದಲ್ಲಿ "ಸಂಭ್ರಮಾಚರಣೆ, ಸಂತೋಷದ ಕೂಟ, ದೊಡ್ಡ ಜಾತ್ರೆ" ಎಂಬ ಅರ್ಥವಿದೆ. ಸಮಾನ ಮನಸ್ಕ ಗುಂಪುಗಳು ಒಂದೆಡೆ ಕಲೆತು ತಮ್ಮ ಜ್ಞಾನ ಕೌಶಲ್ಯಗಳನ್ನು ಪರಸ್ಪರ ವಿಸ್ತರಿಸಿಕೊಂಡು ಸಂತೋಷ ಕೂಟದಲ್ಲಿ ಭಾಗವಹಿಸುವುದೇ ಜಾಂಬೋರೇಟ್-2015. ಈ ಸಂಘಟನೆಯನ್ನು ಪ್ರತೀ ಎರಡು ವರ್ಷಕ್ಕೊಮ್ಮೆ ರಾಜ್ಯದಲ್ಲಿ ಆಚರಿಸಿಕೊಂಡು ಬರಲಾಗುತ್ತಿದೆ. ಈಗ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದ ಡಾ|| ಆನಿಬೆಸೆಂಟ್ ಸ್ಕೌಟ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರಕೇಂದ್ರದಲ್ಲಿ ನಡೆಯಲಿರುವ ಈ ಜಾಂಬೋರೇಟ್-2015, 27ನೇ ತರಬೇತಿ ಶಿಬಿರವಾಗಲಿದೆ. ಸರಿಸುಮಾರು ನಾಲ್ಕರಿಂದ ಐದುಸಾವಿರ ಸ್ಕೌಟ್-ಗೈಡ್‌ಗಳು ತಮ್ಮ ಶಿಕ್ಷಕರೊಂದಿಗೆ ಸಂಘಟನೆಯಾಗಿ ತಮ್ಮ ಕೌಶಲ್ಯ ಪ್ರತಿಭೆಗಳನ್ನು ವಿಸ್ತರಿಸಿಕೊಳ್ಳುತ್ತಾರೆ. ಈ ಜಾಂಬೋರೇಟ್‌ನ ಘೋಷವಾಕ್ಯವೇ "ನೆಲ-ಜಲ-ರಕ್ಷಣೆ ನಮ್ಮಹೊಣೆ" ಎಂಬುದಾಗಿದೆ.

ಸ್ಕೌಟ್ ಹಾಗೂ ಗೈಡ್ ಚಳವಳಿಯ ಸಂಸ್ಥಾಪಕ ಲಾರ್ಡ್ ಬೇಡೆನ್ ಪೋವೆಲ್ ಲಂಡನ್ನಿನಲ್ಲಿ ನೂರು ವರ್ಷಗಳ ಹಿಂದೆಯೇ ಜಾಂಬೋರೇಟ್ ಸಂಘಟಿಸಿ ಚಾಲನೆ ನೀಡಿದ್ದರು. ಈ ಸಂಭ್ರಮಾಚಾರಣೆ ಜಗತ್ತಿನ 194 ದೇಶಗಳಲ್ಲಿ ಜಾಂಬೋರೇಟ್ ಎಂಬುದಾಗಿಯೇ ನಡೆಯುತ್ತಿದೆ.

ಇದೇ ಸಂದರ್ಭದಲ್ಲಿ ಕ್ರಿಸ್‌ಮಸ್ ಆಚರಣೆ ಕುರಿತಂತೆ ಬೆಳಗ್ಗೆ ದಿನಪತ್ರಿಕೆ ಓದುತ್ತಿದ್ದಾಗ ಕ್ರಿಶ್ಚಿಯನ್ ಧರ್ಮಗುರು ಪೋಪ್ ಅವರು ರೋಮ್‌ನ ವ್ಯಾಟಿಕನ್‌ನಲ್ಲಿ ಸಾಮೂಹಿಕ ಪ್ರಾರ್ಥನೆಯನಂತರ ಕ್ರಿಸ್‌ಮಸ್ ಆಚರಣೆಯನ್ನು ಸ್ಕೌಟ್‌ಗಳ ಪಥಸಂಚಲನದ ನಂತರ ಮುಕ್ತಾಯವಾಯಿತು ಎಂದು ವರದಿಯಲ್ಲಿ ಓದಿದೆ. ಈ ಮೂಲಕ ನಾನೂ ಸೇರಿದಂತೆ ಸ್ಕೌಟ್ ಹಾಗೂ ಗೈಡ್ ಚಳವಳಿಯಲ್ಲಿ ಸಕ್ರಿಯವಾಗಿರುವ ನಾವೆಲ್ಲರೂ ಹೆಮ್ಮೆಪಡಬೇಕಾದ ಸಂಗತಿಯೆಂದರೆ, ನಾವು ಒಂದು ಧರ್ಮ, ಒಂದು ದೇಶ ಅಥವಾ ಒಂದು ಗಡಿಯ ಪ್ರದೇಶಕ್ಕೆ ಸೀಮಿತವಾಗಿಲ್ಲ. ನಮ್ಮ ಚಳವಳಿ "ನಮ್ಮ ಜಲ ನೆಲ ರಕ್ಷಣೆ ನಮ್ಮ ಹೊಣೆ" ಎಂಬ ಘೋಷವಾಕ್ಯದೊಂದಿಗೆ ಸಮಕಾಲೀನ ಜಗತ್ತಿನ ಎಲ್ಲಾ ದೇಶಗಳಿಗೂ ನಮ್ಮನ್ನು ನಾವು ವಿಸ್ತರಿಸಿಗೊಂಡಿದ್ದೇವೆ ಎಂಬ ಹೆಮ್ಮೆಯಾಗ ಬೇಕು. ಆದರೂ ನಾವು-ನೀವು ಗಮನಿಸಿದ ಒಂದು ವಿಧ್ವಂಸಕ ದುರಂತದ ಬಗ್ಗೆ ನಿಮ್ಮ ಗಮನ ಸೆಳೆಯುತ್ತಿದ್ದೇನೆ. ನಮ್ಮ ನೆರೆಯ ಪಾಕಿಸ್ತಾನದ ದೇಶದಲ್ಲಿ ಸೈನಿಕ ಶಾಲೆಯ ಮಕ್ಕಳ ಮೇಲೆ ಭಯೋತ್ಪಾದಕರು ಗುಂಡಿನ ಕೆಂಡದ ಮಳೆ ಸುರಿಸಿ ಅವರ ಸಾವಿಗೆ ಕಾರಣರಾದರಲ್ಲ, ಇದು ಅತ್ಯಂತ ಅಮಾನವೀಯವಾದದ್ದು. ನನಗಿರುವ ಕಳಕಳಿ ಏನೆಂದರೆ, ಆ ಶಾಲೆಯಲ್ಲಿ ನಮ್ಮಂತೆಯೇ ಸ್ಕೌಟ್ ಹಾಗೂ ಗೈಡ್ ಕಲಿಕೆಯ ವಿದ್ಯಾರ್ಥಿಗಳು ಬಲಿಪಶುಗಳಾದರೆ ಅಥವಾ ಆ ದೇಶದ ಸ್ಕೌಟ್ ಹಾಗೂ ಗೈಡ್ ಕಲಿಕೆಯಲ್ಲಿರುವ ವಿದ್ಯಾರ್ಥಿಗಳು ಈ ದುರಂತಕ್ಕೆ ಹೇಗೆ ಪ್ರತಿಕ್ರಿಯಿಸಿದ್ದಾರೆ ಎಂಬುದು. ಎಳೆಯ ಕಂದಮ್ಮಗಳನ್ನು ಕಳೆದುಕೊಂಡ ಆ ದೇಶ, ಅವರ ತಂದೆ-ತಾಯಿಗಳ ನೆಮ್ಮದಿಗಾಗಿ ನಾವೆಲ್ಲರೂ ಪ್ರಾರ್ಥಿಸೋಣ.

ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವದ ಕಾರ್ಯಕ್ರಮಕ್ಕೆ ಡಿಸೆಂಬರ್ 11ರಂದು ಅಧಿಕೃತವಾಗಿ ಚಾಲನೆ ದೊರೆತಿದೆ. ಇದು ಯಶಸ್ವಿಯಾಗಲು ಕಾರಣರಾದ ಎಲ್ಲರಿಗೂ ನಾನು ಅಭಾರಿಯಾಗಿದ್ದೇನೆ. ಈಗ ನಮ್ಮೆದುರಿನ ಸವಾಲು ಜಾಂಬೋರೇಟ್-2015ನ್ನು ಯಶಸ್ವಿಯಾಗಿಸುವುದು. ಕಾರ್ಯದರ್ಶಿಯಾಗಿ ನನಗೆ ಇದೊಂದು ಹೊಸ ಅನುಭವ. ಸುಮಾರು ನಾಲ್ಕೈದು ಸಾವಿರ ಸ್ಕೌಟ್-ಗೈಡ್‌ಗಳುಒಂದು ಕಡೆ ಸೇರಿ ಸಂಭ್ರಮಿಸುವುದನ್ನು ನೋಡಲು ನಾನು ಕಾತರನಾಗಿದ್ದೇನೆ. ಈ ಸಂದರ್ಭದಲ್ಲಿ ಹೊರತರಲಿರುವ ಸ್ಮರಣಸಂಚಿಕೆಗೆ ವಿಶೇಷ ಲೇಖನ, ಜಾಹೀರಾತು ಸಂಗ್ರಹದ ಗಡಿ-ಬಿಡಿಯಲ್ಲಿದ್ದೇವೆ. ಜಾಂಬೋರೇಟ್-2015ರ ಯಶಸ್ಸಿಗೆ, ಅಲ್ಲಿನ ಭದ್ರತೆಗಾಗಿ ಸರ್ಕಾರದ ವಿವಿಧ ಇಲಾಖೆಗಳ ಮುಖ್ಯಸ್ಥರನ್ನು ಭೇಟಿಯಾಗುತ್ತಿದ್ದೇವೆ. ಈ ಸಮಾರಂಭಕ್ಕೆ ಆಹ್ವಾನಿತರಾಗಿ ಬರಲು ಘನವೆತ್ತ ರಾಜ್ಯಪಾಲರು, ಮಾನ್ಯ ಮುಖ್ಯಮಂತ್ರಿಗಳು ಹಾಗೂ ಶಿಕ್ಷಣ ಸಚಿವರು, ಗಣ್ಯರು ಒಪ್ಪಿಗೆ ನೀಡಿದ್ದಾರೆ.

ಸ್ಕೌಟ್ ಹಾಗೂ ಗೈಡ್ ಬಗ್ಗೆ ಆಸಕ್ತರಾಗಿರುವ ನೀವು ಬನ್ನಿ. ಜಾಂಬೋರೇಟ್ 2015ರಲ್ಲಿ ನೂತನ ವರ್ಷವನ್ನು ಮಕ್ಕಳ ಜೊತೆ ಸಂತಸದಿಂದ ಆಚರಿಸೋಣ.

ಸ್ಕೌಟ್-ಗೈಡ್ ಶುಭಾಶಯಗಳೊಂದಿಗೆ,

ತಮ್ಮ ವಿಶ್ವಾಸಿ

ಸಿದ್ಧಯ್ಯ

ರಾಜ್ಯ ಕಾರ್ಯದರ್ಶಿ

ರಾಜ್ಯ ವಾರ್ತೆಗಳು

## ಕೇಂದ್ರ ಕಛೇರಿಗೆ ಆರೋಗ್ಯ ಹಾಗು ಕುಟುಂಬ ಕಲ್ಯಾಣ ಸಚಿವರ ಭೇಟಿ

ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರಾದ ಶ್ರೀ ಯು.ಟಿ. ಖಾದರ್ ರವರು ದಿನಾಂಕ 29 ಡಿಸೆಂಬರ್ 2014 ರಂದು ಶಾಂತಿಗೃಹದ ಕೇಂದ್ರ ಕಛೇರಿಗೆ ಭೇಟಿ ನೀಡಿದ್ದರು.

ಈ ಸಂದರ್ಭದಲ್ಲಿ ಅವರು ಮಾತನಾಡುತ್ತಾ "ಶಿಕ್ಷಣವೆಂದರೆ ಕೇವಲ ಪಠ್ಯಪುಸ್ತಕ ಕಲಿಯುವುದಲ್ಲ, ನೈತಿಕ ಮತ್ತು ಸಾಮುದಾಯಿಕ ಶಿಕ್ಷಣದ ಅವಶ್ಯಕತೆಯಿದೆ. ಈ ರೀತಿಯ ಶಿಕ್ಷಣ ಸ್ಕೌಟ್-ಗೈಡ್ ಸಂಸ್ಥೆ ನೀಡುತ್ತಿದೆ. ಪ್ರಸ್ತುತ ಸಂದರ್ಭದಲ್ಲಿ ಕಂಡು ಬರುತ್ತಿರುವ ಬದ್ಧತೆ ಇಲ್ಲದ ಮನೋಭಾವವನ್ನು ಸ್ಕೌಟ್-ಗೈಡ್ ಶಿಕ್ಷಣದಿಂದ ನಿವಾರಿಸಬಹುದು. ಈ ಶಿಕ್ಷಣದಿಂದ ಸವಾಲುಗಳನ್ನು ಎದುರಿಸುವ ಸಾಮರ್ಥ್ಯ ದೊರಕುತ್ತದೆ.

ಸ್ಕೌಟ್-ಗೈಡ್ ಚಟುವಟಿಕೆಗಳಿಗೆ ಸರ್ಕಾರದ ವತಿಯಿಂದ ದೊರಕಬೇಕಾದ ಎಲ್ಲಾ ಸೌಲಭ್ಯಗಳನ್ನು ದೊರಕಿಸಲು ಪ್ರಯತ್ನಿಸುತ್ತೇನೆ ಎಂದು ನುಡಿದರು. ತಮ್ಮ ಸ್ಕೌಟ್ ಶಿಬಿರದ ನೆನಪುಗಳನ್ನು ಮೆಲುಕು ಹಾಕಿದರು.

ಪ್ರಾರಂಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಹಾಗೂ ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಸಿದ್ಧಯ್ಯರವರು ಮಾತನಾಡಿ ಸಂಸ್ಥೆಯ ಸ್ಥೂಲ ಪರಿಚಯವನ್ನು ನೀಡಿ ವಿವಿಧ ತರಬೇತಿ ಕೇಂದ್ರಗಳಲ್ಲಿ ಅವಶ್ಯಕವಿರುವ ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವ ವಿಷಯದಲ್ಲಿ ಮಾನ್ಯ ಸಚಿವರ ಸಹಕಾರ ಕೋರಿದರು. ಜನವರಿಯಲ್ಲಿ ನಡೆಯಲಿರುವ ರಾಜ್ಯ ಜಾಂಬೋರೇಟನಲ್ಲಿ ಭಾಗವಹಿಸಲು ಆಹ್ವಾನಿಸಿದರು. ಶ್ರೀಮತಿ ಗೀತಾ ನಟರಾಜ್ ರಾಜ್ಯ ಆಯುಕ್ತರು (ಗೈಡ್ಸ್)ಸ್ವಾಗತ ಕೋರಿದರೆ ಶ್ರೀ ಎಂ.ಎ. ಖಾಲಿದ್ ರಾಜ್ಯ ಆಯುಕ್ತ (ಸ್ಕೌಟ್ಸ್) ವಂದಿಸಿದರು. ರಾಜ್ಯ ಪದಾಧಿಕಾರಿಗಳು, ಬೆಂಗಳೂರು ಉತ್ತರ ಮತ್ತು ದಕ್ಷಿಣ ಜಿಲ್ಲೆಯಪದಾಧಿಕಾರಿಗಳು ಹಾಗೂ ಹಿತೈಷಿಗಳು ಸಭೆಯಲ್ಲಿ ಭಾಗವಹಿಸಿದ್ದರು.

## ರಾಜ್ಯಮಟ್ಟದ ರೋವರ್ಸ್ ಮತ್ತು ರೇಂಜರ್ಸ್ ಚಾರಣ ಶಿಬಿರ

ದಶಕಗಳ ಹಿಂದೆಯೇ ಸ್ಥಾಪನೆಗೊಂಡ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಇಂದು ಬೆಳೆಯದಿರುವುದು ಬೇಸರಕ್ಕೆ ಕಾರಣವಾಗಿದೆ ಎಂದು ಸಂಸದ ಶ್ರೀ ಕೆ.ಎಚ್. ಮುನಿಯಪ್ಪ ತಿಳಿಸಿದರು. ದಿನಾಂಕ 21-12-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆ ಮತ್ತು ಕೋಲಾರ ಜಿಲ್ಲಾ ಸಂಸ್ಥೆಯ ಸಂಯುಕ್ತಾಶ್ರಯದಲ್ಲಿ ತಾಲೂಕಿನ ಅವಣಿಯಲ್ಲಿ ಏರ್ಪಡಿಸಿದ್ದ ರಾಜ್ಯ ಮಟ್ಟದ ರೋವರ್ಸ್-ರೇಂಜರ್ಸ್ ಚಾರಣ ಶಿಬಿರ ಉದ್ಘಾಟಿಸಿ ಮಾತನಾಡಿದರು. ರಾಜ್ಯ ಸಭಾ ಸದಸ್ಯ ಶ್ರೀ ರಾಜೀವಗೌಡ ಮಾತನಾಡಿ, ತಾವು ಶೈಕ್ಷಣಿಕ ಜೀವನದಲ್ಲಿ ಸ್ಕೌಟಿಂಗ್‌ನಲ್ಲಿ ಪಾಲ್ಗೊಂಡು ಶಿಸ್ತು ರೂಪಿಸಿಕೊಂಡಿದ್ದರಿಂದಲೇ ಈ ಮಟ್ಟಕ್ಕೆ ಏರಲು ಸಾಧ್ಯವಾಗಿದೆ. ಎಲ್ಲರೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಪಾಲ್ಗೊಳ್ಳಬೇಕೆಂದರು. ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ, ಕೋಲಾರ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ.ವಿ. ಶಂಕರಪ್ಪ ಜಿಲ್ಲಾ ಪದಾಧಿಕಾರಿಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು.

ದಿನಾಂಕ 22-12-2014 ರಂದು ಸಂಜೆ ಶ್ರೀ ಯು.ಟಿ. ಖಾದರ್, ಮಾನ್ಯ ಆರೋಗ್ಯ ಸಚಿವರು ಹಾಗೂ ಕೋಲಾರ ಜಿಲ್ಲಾ ಉಸ್ತುವಾರಿ ಮಂತ್ರಿಗಳು, ಕರ್ನಾಟಕ ಸರ್ಕಾರ ಇವರು ಆಗಮಿಸಿ ತಮ್ಮ ಪ್ರಾಥಮಿಕ ಶಿಕ್ಷಣದಲ್ಲಿ ಸ್ಕೌಟಿಂಗ್‌ಗೆ ಸೇರಿದ ಅನುಭವನ್ನು ಹಂಚಿಕೊಂಡರು. ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಕೆ.ವಿ. ಶಂಕರಪ್ಪ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು. ಶ್ರೀ ಬಸಪ್ಪಗೌಡ, ಅಧ್ಯಕ್ಷರು, ಜಿಲ್ಲಾ ಸಂಸ್ಥೆ ಮುಖ್ಯ ಅತಿಥಿಯಾಗಿದ್ದರು. ಡಾ॥ ರಮೇಶ್, ಉಪಾಧ್ಯಕ್ಷರು, ಡಾ॥ ಚಂದ್ರಶೇಖರ್, ಶ್ರೀ ಬಾಲಕೃಷ್ಣಗೌಡ, ವಕೀಲರು, ಶ್ರೀ ರಾಮಕೃಷ್ಣಾ, ಇಂಡಸ್ಟ್ರಿಯಲಿಸ್ಟ್, ಕೆ.ಜಿ.ಎಫ್. ಇವರು ಭಾಗವಹಿಸಿದ್ದರು.

ಶ್ರೀ ಕೆ.ಆರ್. ಸುರೇಶ್, ರೋವರ್ ಲೀಡರ್, ಕೋಲಾರ ಇವರು ರೋವರ್ ವಿಭಾಗದ ನಾಯಕರಾಗಿ ಮತ್ತು ಶ್ರೀಮತಿ ಶಾಂತಕುಮಾರಿ, ರೇಂಜರ್ ನಾಯಕಿ, ಮಹಾರಾಣಿ ಕಾಲೇಜು, ಬೆಂಗಳೂರು ಇವರು ರೇಂಜರ್ ವಿಭಾಗದ ನಾಯಕತ್ವ ವಹಿಸಿದ್ದರು. ರಾಜ್ಯ ಸಂಘಟನಾ ಆಯುಕ್ತರುಗಳಾದ ಶ್ರೀ ಟಿ.ಎ. ಮಂಜುನಾಥಾಚಾರ್ ಮತ್ತು ಶ್ರೀಮತಿ ಸಿ. ಮಂಜುಳಾ ಶಿಬಿರದ ಮೇಲ್ವಿಚಾರಕರಾಗಿದ್ದರು. ರಾಜ್ಯದ ವಿವಿಧ ಜಿಲ್ಲೆಗಳಿಂದ 140 ರೋವರ್‌ಗಳು ಮತ್ತು 80 ರೇಂಜರ್‌ಗಳು ಈ ಶಿಬಿರದಲ್ಲಿ ಭಾಗವಹಿಸಿದ್ದರು.

# ರಾಜ್ಯಮಟ್ಟದ ತರಬೇತಿ ಶಿಬಿರಗಳು

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯ ವತಿಯಿಂದ ದಿನಾಂಕ : 07-12-2014 ರಿಂದ 14-12-2014 ರ ವರೆಗೆ ಕಬ್ ಮಾಸ್ಟರ್ಸ್‌ಗಳ ಮೂಲ ತರಬೇತಿ, ದಿನಾಂಕ 08-12-2014 ರಿಂದ 14-12-2014 ರ ವರೆಗೆ ಕಬ್ ಮಾಸ್ಟರ್ಸ್‌ಗಳ ಮುಂದುವರೆದ ತರಬೇತಿ ಹಾಗೂ ದಿ|| 10-12-2014 ರಿಂದ 14-12-2014 ನಕ್ಷೆ ತಯಾರಿಕೆ ತರಬೇತಿ ಶಿಬಿರವನ್ನು ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ ಕೊಂಡಜ್ಜಿ ದಾವಣಗೆರೆ ಜಿಲ್ಲೆ ಇಲ್ಲಿ ಏರ್ಪಡಿಸಲಾಗಿತ್ತು. ವಿವರ ಕೆಳಕಂಡಂತೆ ಇವೆ.

1) ಕಬ್ ಮಾಸ್ಟರ್ಸ್‌ಗಳ ಮೂಲ ತರಬೇತಿ, 11 ಶಿಬಿರಾರ್ಥಿಗಳು, ನಾಯಕಿ : ಶ್ರೀಮತಿ ರಾಧಮ್ಮ ಎಲ್.ಟಿ.(ಸಿ)

2) ಕಬ್ ಮಾಸ್ಟರ್ಸ್‌ಗಳು ಮುಂದುವರೆದ ತರಬೇತಿ, 23 ಶಿಬಿರಾರ್ಥಿಗಳು ನಾಯಕಿ ಸಂಧ್ಯಾರಾಣಿ ಎಲ್.ಟಿ.(ಸಿ)

3) ನಕ್ಷೆ ತಯಾರಿಕೆ ಶಿಬಿರ 27 ಶಿಬಿರಾರ್ಥಿಗಳು, ನಾಯಕರು : ಶ್ರೀ ಎನ್. ಶ್ರೀನಿವಾಸನ್ ಎಲ್.ಟಿ.(ಎಸ್.)

ಶ್ರೀ ಯತೀಶ್ ಕುಮಾರ್, ತುಮಕೂರು, ಶ್ರೀ ನಾಯಕ ಬೊಮ್ಮನ್, ಎ.ಎಲ್.ಟಿ.(ಕಬ್ಸ್) ಶ್ರೀಎಲ್.ಟಿ. ಲೋಕೇಶ್ ಎಲ್.ಟಿ.(ಸಿ) ಶ್ರೀ ಕೆ.ಜಿ. ಗೋಪಾಲಕೃಷ್ಣ. ಎಲ್.ಟಿ.(ಸ್ಕೌಟ್) ಶ್ರೀ ಎ. ರಾಮಚಂದ್ರ ಎಲ್.ಟಿ.(ಸ್ಕೌಟ್), ಶ್ರೀ ಶರಾಫ್ ಮಾದಪ್ಪ, ಎಲ್.ಟಿ.(ಸ್ಕೌಟ್) ಶ್ರೀ ಬಾಲಕೃಷ್ಣ ಆರ್.ಎಸ್.ಎಲ್. ಇವರುಗಳು ವಿವಿಧ ತರಬೇತಿಗಳ ಸಹಾಯಕರಾಗಿದ್ದರು. ಶ್ರೀ ಮಲ್ಲೇಶಪ್ಪ ಆಹಾರ ವ್ಯವಸ್ಥೆ ನಿರ್ವಹಿಸಿದರು.

ಶಿಬಿರದ ದಿನಚರಿಯಂತೆ ಮತ್ತು ಎಸ್.ಒ.ಟಿ.ಯಂತೆ ದಿನನಿತ್ಯದ ಚಟುವಟಿಕೆಗಳು ಜರುಗಿದವು. ನಕ್ಷಾ ರಚನೆ ಶಿಭಿರಾರ್ಥಿಗಳಿಗೆ ವಿಶೇಷವಾಗಿ, ನಕ್ಷೆ ಓದುವುದು, ನಕ್ಷೆ ತಯಾರುಮಾಡುವುದು, ಕಾಂಟೂರ್ಸ್, ಕನ್‌ವೆನ್ಷನಲ್ ಸೈನ್ಸ್, ಗ್ರಿಡ್ ರೆಫರೆನ್ಸ್, ಇತ್ಯಾದಿಗಳನ್ನು ಎಲ್‌ಸಿಡಿ ಪ್ರೊಜೆಕ್ಟರ್ ಮೂಲಕ ವಿವರವಾಗಿ ನಾಯಕರಾದ ಶ್ರೀ ಎನ್. ಶ್ರೀನಿವಾಸನ್ ರವರು ತಿಳಿಸಿಕೊಟ್ಟರು. ದಿನಾಂಕ 14-12-2014 ರಂದು ಸರ್ವಧರ್ಮ ಸಮನ್ವಯ ಪ್ರಾರ್ಥನೆಯನ್ನು ಏರ್ಪಡಿಸಲಾಗಿತ್ತು ಮತ್ತು 2 ಗಂಟೆಗೆ ಶ್ರೀ ಎನ್. ಶ್ರೀನಿವಾಸನ್ ರವರ ಅಧ್ಯಕ್ಷತೆಯಲ್ಲಿ ಸಮಾರೋಪ ಸಮಾರಂಭವನ್ನು ಏರ್ಪಡಿಸಿ ಸಾಂಸ್ಕೃತಿಕ ಕಾರ್ಯಕ್ರಮವನ್ನು ನಡೆಸಲಾಯಿತು. ಶ್ರೀ ಎಲ್.ಟಿ. ಲೋಕೇಶ್ ರಾಜ್ಯ ತರಬೇತಿ ಆಯುಕ್ತರು ವಂದನೆ ಸಲ್ಲಿಸಿದರು. ಧ್ವಜ ಅವರೋಹಣದ ನಂತರ ಶಿಬಿರವು ಮುಕ್ತಾಯಗೊಂಡಿತು.

# ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ

ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಭದ್ರ ಬುನಾದಿ ಹಾಕಿದ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಆಚರಣೆಗೆ ದಿನಾಂಕ 11-12-2014 ರಂದು ಚಾಲನೆ ನೀಡಲಾಯಿತು.

ಬೆಂಗಳೂರಿನ ಅರಮನೆ ರಸ್ತೆಯ ಶಾಂತಿಗೃಹದ ಆವರಣದ ಸಭಾಭವನದಲ್ಲಿ ನಡೆದ ಸಮಾರಂಭದಲ್ಲಿ ಕನ್ನಡ ಸಾಹಿತ್ಯ ಪರಿಷತ್‌ನ ಮಾಜಿ ಅಧ್ಯಕ್ಷರಾದ ಡಾ. ಸಾ.ಶಿ ಮರುಳಯ್ಯನವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ

ಮಾತನಾಡುತ್ತಾ ಮೌಲ್ಯಗಳು ಎಲ್ಲರಿಗೂ ಪ್ರೇರಣೀಯ. ಸಮಾಜ ಸೇವಾ ಮನೋಭಾವ ಬೆಳಸಿಕೊಂಡ ಬಸಪ್ಪ ನವರು "ಮಾತಿಗಿಂತ ಕೃತಿಗೆ ಹೆಚ್ಚಿಗೆ ಆದ್ಯತೆ ನೀಡಿದ್ದರು" ಎಂದರು.

ಡಾ. ರಮೇಶ್ ಕಾಮತ್ ಮಾತನಾಡಿ ಕೊಂಡಜ್ಜಿ ಬಸಪ್ಪನವರು ಉತ್ತಮ ಸಮಾಜಸೇವೆಯ ಮೂಲಕ ಕೋಟಾ ಶಿವರಾಮ ಕಾರಂತರ ನುಡಿಯನ್ನು ಸಾರ್ಥಕ ಗೊಳಿಸಿದ್ದಾರೆ ಎಂದು ನುಡಿದರು.

ಮಾಜಿ ಕೇಂದ್ರ ಸಚಿವ ಶ್ರೀ ಎಂ.ವಿ. ರಾಜಶೇಖರನ್ ರವರು www.bsgkarnataka.org ಮತ್ತು www.kondajjibasappa.org ವೆಬ್‌ಸೈಟ್ ಬಿಡುಗಡೆ ಮಾಡಿದರು. ಅಧ್ಯಕ್ಷತೆ ವಹಿಸಿದ್ದ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಮಾತನಾಡಿ ರಾಜ್ಯದ ಎಲ್ಲಾ ಶಾಲೆಗಳಲ್ಲಿ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳನ್ನು ಕಡ್ಡಾಯಗೊಳಿಸಬೇಕೆಂದು ಸರ್ಕಾರಕ್ಕೆ ಮನವಿ ಮಾಡಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ಸಂಸ್ಥೆಯು ಉಪಾಧ್ಯಕ್ಷರಾಗಿ ಆಯ್ಕೆಯಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರವರನ್ನು ಇದೇ ಸಂದರ್ಭದಲ್ಲಿ ಸನ್ಮಾನಿಸಲಾಯಿತು.

ಪ್ರಾರಂಭದಲ್ಲಿ ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು (ಸ್ಕೌಟ್ಸ್) ಸ್ವಾಗತಿಸಿದರು. ಶ್ರೀಮತಿ ಗೀತಾ ನಟರಾಜ್ ರಾಜ್ಯ ಆಯುಕ್ತರು (ಗೈಡ್ಸ್) ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀಮತಿ ಎಸ್.ಕೆ. ಪ್ರಭಾ, ರಾಜ್ಯ ಜಂಟಿ ಕಾರ್ಯದರ್ಶಿ (ಗೈಡ್ಸ್) ವಂದನಾರ್ಪಣೆ ಸಲ್ಲಿಸಿದರು.

ರಾಜ್ಯ ಸಂಸ್ಥೆ ಪದಾಧಿಕಾರಿಗಳು, ಬೆಂಗಳೂರು ಉತ್ತರ, ಬೆಂಗಳೂರು ದಕ್ಷಿಣ ಮತ್ತು ರಾಜ್ಯದ ಇತರ ಜಿಲ್ಲೆಗಳ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

ಬೆಂಗಳೂರು ಉತ್ತರ ಮತ್ತು ಬೆಂಗಳೂರು ದಕ್ಷಿಣ ಜಿಲ್ಲೆಯ ಸುಮಾರು 500 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

# ಅಭಿನಂದನೆಗಳು

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ರಾಷ್ಟ್ರೀಯ ಸಂಸ್ಥೆ ನೀಡುವ ಪ್ರಶಸ್ತಿಗೆ ಭಾಜನರಾಗಿರುವ ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈ) (ಬೆಳ್ಳಿ ಆನೆ) ಶ್ರೀ ಆರ್. ಚಂದ್ರಶೇಖರನ್ ಎಲ್.ಟಿ.(ಕಬ್) (ಬೆಳ್ಳಿ ನಕ್ಷತ್ರಕ್ಕೆ ಪಟ್ಟಿ) ಮತ್ತು ಶ್ರೀ ಎಂ. ಶ್ರೀನಿವಾಸ್, (ಬೆಳ್ಳಿ ನಕ್ಷತ್ರ) ಇವರುಗಳಿಗೆ ರಾಜ್ಯ ಸಂಸ್ಥೆ ಪರವಾಗಿ ಹೃತ್ಪೂರ್ವಕ ಅಭಿನಂದನೆಗಳು

– ರಾಜ್ಯ ಕಾರ್ಯದರ್ಶಿ

# ಜಿಲ್ಲಾ ವಾರ್ತೆಗಳು

## ಬಳ್ಳಾರಿ

ದಿನಾಂಕ 16-10-2014 ರಿಂದ 18-10-2014 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಬಳ್ಳಾರಿ ವತಿಯಿಂದ ಜಿಲ್ಲಾ ಮಟ್ಟದ ರೋವರ್, ರೇಂಜರ್ಸ್ ಪ್ರವೀಣ್ ಪೂರ್ವ ಸಿದ್ಧತಾ ಶಿಭಿರವನ್ನು ಮುರಾರ್ಜಿ ದೇಸಾಯಿ ಅಲ್ಪ ಸಂಖ್ಯಾತರ ವಸತಿ ಶಾಲೆ ಕೊಳಗಲ್ಲು (ಅಲ್ಲಿಪುರ) ದಲ್ಲಿ ನಡೆಸಲಾಯಿತು. ಶಿಭಿರದ ರೋವರ್ ನಾಯಕರಾಗಿ ಶ್ರೀ ಗಣಪತಿ ಪ್ರಿ ಎಎಲ್‌ಟಿ (ಆರ್.) ಹಾಗೂ ರೇಂಜರ್ಸ್ ನಾಯಕರಾಗಿ ಶ್ರೀಮತಿ ಶೋಭಾರಾಣಿ ವಹಿಸಿಕೊಂಡಿದ್ದರು. ಶ್ರೀ ಹೆಚ್.ಕೆ. ರಂಗಸ್ವಾಮಿ ಹಾಗು ಶ್ರೀ ಎಮ್. ನಾಗರಾಜ್ ಎ.ಎಲ್.ಟಿ. (ಎಸ್.) ಜಿಲ್ಲಾ ತರಬೇತಿ ಆಯುಕ್ತರು ಸ್ಕೌಟ್ ಇವರು ಸಹಾಯಕರಾಗಿದ್ದರು. ಬಳ್ಳಾರಿ ಜಿಲ್ಲೆಯ ಮೂರು ತಾಲ್ಲೂಕಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ರೋವರ್ಸ್, ರೇಂಜರ್ಸ್‌ಗಳು ಒಟ್ಟು 96 ವಿದ್ಯಾರ್ಥಿಗಳು ಮತ್ತು ಮೂರು ಸರ್ವೀಸ್ ರೋವರ್ಸ್‌ಗಳು ಭಾಗವಹಿಸಿದ್ದರು. ಡಾ. ವಿಶ್ವನಾಥ್ ಪಲ್ಲೇದ್ ಚೀಫ್ ಸಿ.ಎಸ್.ಆರ್.ಜೆ.ಎಸ್. ಡಬ್ಲ್ಯೂ ತೋರಣಗಲ್ಲು ಇವರು ಆಗಮಿಸಿ, ಶಿಭಿರದ ಉದ್ಘಾಟನೆ ಮಾಡಿ ಮಾತನಾಡಿದರು. ಶ್ರೀ ಎಮ್.ಟಿ. ಮಲ್ಲೇಶ್ ಉಪಾಧ್ಯಕ್ಷರು ಜಿಲ್ಲಾ, ಸಂಸ್ಥೆ ಇವರು ಪ್ರಾಸ್ತಾವಿಕವಾಗಿ ಮಾತನಾಡಿದರು. ಡಾ. ವಿದ್ಯಾ ಎ.ಡಿ.ಸಿ.(ಜಿ.) ಮಾತನಾಡಿ ವಿದ್ಯಾರ್ಥಿಗಳಿಗೆ ಶಿಸ್ತು ಅತಿಮುಖ್ಯ ವಿದ್ಯಾಭ್ಯಾಸದ ಜೊತೆಗೆ ಸೇವೆಯನ್ನು ಅಳವಡಿಸಿಕೊಂಡು ಉತ್ತಮ ನಾಗರೀಕರಾಗಿ ಬೆಳೆಯಬೇಕು ಎಂದು ಹೇಳಿದರು. ಅಧ್ಯಕ್ಷತೆ ವಹಿಸಿದ್ದ ಡಾ॥ ಧನುಜಾರಾಣಿ ಜಿಲ್ಲಾ ಆಯುಕ್ತರು (ಗೈ) ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ವಿದ್ಯಾರ್ಥಿ ದಿಶೆಯಲ್ಲಿ ಅಳವಡಿಸಿಕೊಂಡ ಧ್ಯೇಯೋದ್ಧೇಶಗಳು ಮುಂದೆ ಅತ್ಯುತ್ತಮ ಭವಿಷ್ಯಕ್ಕೆ ನಾಂದಿ ಎಂದು ತಿಳಿಸಿದರು.

ದಿನಾಂಕ 18-10-2014 ರಂದು ಸಾಯಂಕಾಲ ಸಮಾರೋಪ ಸಮಾರಂಭ ನಡೆಯಿತು. ಜಿಲ್ಲಾ ಆಯುಕ್ತರು(ಸ್ಕೌಟ್ಸ್) ಶ್ರೀ ಕೆ. ವಿರೇಶ್ ಅಧ್ಯಕ್ಷತೆಯನ್ನು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಎಸ್. ವಿಜಯಸಿಂಹ ಹಾಗು ಮುರಾರ್ಜಿ ದೇಸಯಿ ಶಾಲೆಯ ಕುಮಾರಿ ಕವಿತಾ ಭಾಗವಹಿಸಿದ್ದರು. ರೋವರ್ ಲೀಡರ್ ಶ್ರೀ ರಾಮಾಂಜನೇಯ ಇವರು ಕಾರ್ಯಕ್ರಮವನ್ನು ನಿರೂಪಿಸಿದರು. ಶ್ರೀ ಎಮ್. ನಾಗರಾಜ್ ಎ.ಎಲ್.ಟಿ.(ಎಸ್.) ಜಿಲ್ಲಾ ತರಬೇತಿ ಆಯುಕ್ತರು ಸ್ಕೌಟ್ಸ್ ರವರು ವಂದಿಸಿದರು.

## ಬಾಗಲಕೋಟೆ

ದಿನಾಂಕ 01-11-2014 ರಂದು ಜಿಲ್ಲಾ ಸಂಸ್ಥೆಯಲ್ಲಿ ಕನ್ನಡ ರಾಜ್ಯೋತ್ಸವ ಆಚರಿಸಲಾಯಿತು. ಬೆಳಿಗ್ಗೆ ಸ್ಕೌಟ್ಸ್-ಗೈಡ್ಸ್‌ಗಳಿಂದ ರಾಜ್ಯೋತ್ಸವ ಕುರಿತು ಭಾಷಣ ಏರ್ಪಡಿಸಲಾಯಿತು. ನಂತರ 10 ಗಂಟೆಗೆ ಜಿಲ್ಲಾ ಆಡಳಿತ ಭವನದಿಂದ ನವನಗರದ ಕ್ರೀಡಾಂಗಣದ ವರೆಗೆ ಜರುಗಿದ ಪಥ ಸಂಚಲನದಲ್ಲಿ ವಿವಿಧ ಶಾಲಾ ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಶಿಕ್ಷಕ ವೃಂದ ಭಾಗವಹಿಸಿದ್ದರು.

* ದಿನಾಂಕ 08-11-2014 ರಂದು ಶ್ರೀ ಭಕ್ತ ಕನಕದಾಸ ಜಯಂತಿಯ ಆಚರಣೆಯನ್ನು ಜಿಲ್ಲಾ ಕೇಂದ್ರ ಕಛೇರಿಯಲ್ಲಿ ಜರುಗಿಸಲಾಯಿತು. ಜಿಲ್ಲೆಯ ಪದಾಧಿಕಾರಿಗಳು ಹಾಗೂ ವಿವಿಧ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಕಾರ್ಯಕ್ರಮದಲ್ಲಿ ಹಾಜರಿದ್ದರು.

* ದಿನಾಂಕ 07-11-2014 ರಂದು ಆದರ್ಶ ಪ್ರೌಢಶಾಲೆ, ನವನಗರದಲ್ಲಿ ಜರುಗಿದ ಜಾಗೃತ್ ಸಪ್ತಾಹ ಅರಿವು ಕಾರ್ಯಕ್ರಮ-2014 ಹಾಗು ಸ್ಕೌಟ್ಸ್-ಗೈಡ್ಸ್ ಧ್ವಜ ಚೀಟಿಗಳ ಬಿಡುಗಡೆ ಕಾರ್ಯಕ್ರಮ ಜರುಗಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಲೋಕಾಯುಕ್ತ ಎಸ್.ಪಿ. ಶ್ರೀ ಟಿ.ವಿ. ಪ್ರಭಾಕರ್ ಧ್ವಜಚೀಟಿ ಬಿಡುಗಡೆಗೊಳಿಸಿದರು. ಡಿ.ಡಿ.ಪಿ.ಐ., ಶ್ರೀ ಬಿ.ಹೆಚ್. ಗೊನಾಳ, ಡಿ.ಸಿ.(ಜಿ) ಶ್ರೀಮತಿ ಜಾಸ್‌ಮಿನ್ ಕಿಲ್ಲೇದಾರ, ಲೋಕಾಯುಕ್ತ ಇನ್ಸ್‌ಪೆಕ್ಟರ್ ಶ್ರೀ ಎ.ಎ. ಮುಜಾವರ್, ಜಿಲ್ಲಾ ಕಾರ್ಯದರ್ಶಿ, ಶ್ರೀ ಚಂದ್ರಶೇಖರ ಸಾವಳಗಿ ಹಾಗು ಶ್ರೀ ಕೆ.ಆರ್. ದೇಶಪಾಂಡೆ, ಶ್ರೀ ಎಸ್.ಆರ್. ಗೌಡರ, ಶಾಲೆಯ ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳು ಶಿಕ್ಷಕ ವೃಂದ ಕಾರ್ಯಕ್ರಮದಲ್ಲಿ ಹಾಜರಿದ್ದರು.

## Bangalore North District

The Golden Jubile Rally to mark the beginningof a year long programme of the Shivajinagar Local Association was Inaugurated by Sri P.G.R. Sindhia, State Chief Commissioner at Good will Circle High School, Fraser Town, Bangalore on 6-12-2014

It was presided by T.S. Lucas Vice-President of the BS&G Karnataka. Sri K.B. Shanmukhappa, Vice President, Smt. Saroja V. Naidu, Vice-President, Sri M.A. Khalid, State Chief Commissioner, (S) Smt. Geetha Nataraj, State Chief Commissioner (G) and other officials were present. Smt. Rathnanjali Nicodomus, President -SLA, Smt. Vani - Principal, Good Will Circle High School.

309 Scouts-Guides, Cubs-Bulbuls, Rover-Rangers, Scouters-Guiders attended the programme.

## ಬೀದರ್

ದಿನಾಂಕ 01-11-2014 ರಂದು ಜಿಲ್ಲಾ ಕ್ರೀಡಾಂಗಣದಲ್ಲಿ ಕನ್ನಡ ರಾಜ್ಯೋತ್ಸವದ ಅಂಗವಾಗಿ ನಡೆದ ಧ್ವಜಾರೋಹಣ ಪರೇಡ್‌ನಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಅಧ್ಯಕ್ಷರಾದ ಜಿಲ್ಲಾಧಿಕಾರಿ ಡಾ. ಪಿ.ಸಿ. ಜಾಫರ್ ರವರು ಸ್ಕೌಟ್ಸ್‌ಗಳಿಗೆ "ಪ್ರಶಸ್ತಿ" ಪತ್ರ ನಿಡಿದರು. ವೇದಿಕೆಯಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಡಾ. ಎಸ್.ಎಸ್. ಸಿದ್ದಾರಡ್ಡಿ, ಗೈಡ್ಸ್ ಆಯುಕ್ತೆ ಶ್ರೀಮತಿ ಲೀಲಾವತಿ ಚಕೋತೆ, ಜಿಲ್ಲಾ ಕಾರ್ಯದರ್ಶಿ ಶೇಖ್ ಮಸ್ತಾಕ್ ಆಲಿ, ಡಾ. ಭರಶೆಟ್ಟಿ ಮತ್ತು ಡಿ.ಓ.ಸಿ., ಶ್ರೀ ಶಿವಕುಮಾರ ಹಾಲಹಳ್ಳಿ ಉಪಸ್ಥಿತರಿದ್ದರು.

ಸಂಜೆ ರಂಗಮಂದಿರದಲ್ಲಿ ನಡೆದ ಸಾಂಸ್ಕೃತಿ ಸೌರಭದಲ್ಲಿ ಸ್ಕೌಟ್ಸ್‌ಗಳು "ಸ್ಕೌಟ್ಸ್ ಪ್ರಾಣಿಮಿತ್ರ ಮತ್ತು ಪರಿಸರ ಪ್ರೇಮಿ" ಕಿರುನಾಟಕ ಪ್ರದರ್ಶಿಸಿದರು.

* ದಿನಾಂಕ 10-11-2014 ಬೀದರ್ ಜಿಲ್ಲೆ ಹುಮನಾಬಾದ್ ಸ್ಥಳೀಯ ಸಂಸ್ಥೆಯ ದಿ ಮಾಣಿಕ್ ಪಬ್ಲಿಕ್ ಸ್ಕೂಲ್ ನಲ್ಲಿ "ಫೌಂಡೇಷನ್ ಡೇ" ಕಾರ್ಯಕ್ರಮ ನಡೆಯಿತು. ಕಾರ್ಯಕ್ರಮದಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಡಾ. ಸಿದ್ದಾರಡ್ಡಿ, ಗೈಡ್ಸ್ ಆಯುಕ್ತೆ ಶ್ರೀಮತಿ ಲೀಲಾವತಿ ಚಕೋತೆ, ಡಿ.ಓ.ಸಿ., ಶ್ರೀ ಶಿವಕುಮಾರ ಹಾಲಹಳ್ಳಿ, ಸ್ಕೌಟ್ ಮಾಸ್ಟರ್ ಶ್ರೀ ಪರಮೇಶ್ವರ ಹೊಳಕುಂದೆ, ಶ್ರೀ ಜೈಪಾಲರಡ್ಡಿ, ಶ್ರೀ ಲಕ್ಷ್ಮಣ, ಶ್ರೀ ಶಿವಕುಮಾರ ಮೆರಾಸೆ, ಅನೀಲಕುಮಾರ್ ಹಾಗೂ 200 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದರು. ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು "ಸ್ವಚ್ಛ ಭಾರತ ಅಭಿಯಾನ"ದ ಅಂಗವಾಗಿ ಶ್ರಮದಾನ ಮಾಡಿದರು.

* ದಿನಾಂಕ 10-11-2014 ರಿಂದ 12-11-2014 ರ ವರೆಗೆ ಜಿಲ್ಲಾ ಮಟ್ಟದ ತೃತೀಯ ಸೋಪಾನ ಪರೀಕ್ಷಾ ಶಿಬಿರವನ್ನು ಏರ್ಪಡಿಸಲಾಯಿತು. ಶಿಬಿರದ ನಾಯಕರಾಗಿ ಔರಾದ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಶಿವಕುಮಾರ ಮೆಣಸೆ ಕಾರ್ಯ ನಿರ್ವಹಿಸಿದರು.

* ದಿನಾಂಕ 14-11-2014 ರಂದು ಮಕ್ಕಳ ದಿನಾಚರಣೆ ಅಂಗವಾಗಿ 'ಸ್ವಚ್ಛತಾ ಶಿಬಿರ'ವನ್ನು ಹುಮನಾಬಾದ್ ಸ್ಥಳೀಯ ಸಂಸ್ಥೆ ಹಾಗು ಜಿಲ್ಲಾ ಸಂಸ್ಥೆ ಸಂಯುಕ್ತವಾಗಿ ಹಮ್ಮಿಕೊಂಡಿತ್ತು. ಹುಮನಾಬಾದ್ ನಗರ ಬಸ್ ಡಿಪೋ ಹತ್ತಿರದ "ಭವಾನಿ ಮಂದಿರ"ದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಶ್ರಮದಾನ ಮಾಡಿದರು.

* ದಿನಾಂಕ 25-11-2014 ರಿಂದ ಜಿಲ್ಲಾಮಟ್ಟದಲ್ಲಿ ಎರಡು ದಿನಗಳ ಸ್ಕೌಟ್ಸ್-ಗೈಡ್ಸ್ ಬ್ಯಾಡ್ಜ್ ವರ್ಕ್ ಶಿಬಿರವು ಪಾಪನಾಶದ ಹತ್ತಿರ ಬಸವಗಿರಿಯಲ್ಲಿ ಆರಂಭವಾಯಿತು. ಸ್ಕೌಟ್‌ಗಳು ದೀಕ್ಷೆಪಡೆದು ಹಂತಹಂತವಾಗಿ ಸ್ಕೌಟಿಂಗ್ ಕೌಶಲ್ಯಗಳನ್ನು ಕಲಿಯುತ್ತಾ ಸಾಗುತ್ತಾರೆ ಎಂದು ಶಿಬಿರದ ಉದ್ಘಾಟನೆ ಮಾಡಿದ ಜಿಲ್ಲಾ ಮುಖ್ಯ ಆಯುಕ್ತ ಡಾ. ಎಸ್.ಎಸ್. ಸಿದ್ದಾರಡ್ಡಿ ಹೇಳಿದರು. ಇಂದು ಪ್ರತಿ ಶಾಲೆಯಲ್ಲಿ ಸ್ಕೌಟ್ ಗೈಡ್‌ಗಳಿರಲೆಂದು ನಾನು ಆಶಿಸುತ್ತೇನೆ. ಎಂದು ಜಿಲ್ಲಾ ಕಾರ್ಯದರ್ಶಿ ಶ್ರೀ ಶೇಖ್ ಮುಸ್ತಾಖ ಅಲಿ ಹೇಳಿದರು. ಇದೇ ಸಂದರ್ಭದಲ್ಲಿ ಸ್ಕೌಟ್-ಗೈಡ್‌ಗಳನ್ನು ಉದ್ದೇಶಿಸಿ ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಲೀಲಾವತಿ ಚಕೋತೆ ಮಾತನಾಡಿದರು.

ಶಿಬಿರದಲ್ಲಿ ನಗರದ ವಿವಿಧ ಶಾಲೆಗಳಿಂದ 266 ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಡಾ: ಭರಶೆಟ್ಟಿ ಹೆಚ್.ಬಿ., ಸಹ ನಾಯಕರಾಗಿ ಶ್ರೀ ಶಿವಕುಮಾರ ಮೆಣಸೆ, ಶ್ರೀ ಲಕ್ಷ್ಮಣ ಶ್ರೀಮತಿ ಅಕ್ಕನಾಗಮ್ಮ, ಶ್ರೀಮತಿ ಹೇಮಲತಾ ಪಾಟೀಲ್ ಸ್ಕೌಟ್ ಗೈಡ್‌ಗಳಿಗೆ ತರಬೇತಿ ನೀಡಿದರು ಜಿಲ್ಲಾ ಸಂಘಟನಾ ಆಯುಕ್ತ ಶಿವಕುಮಾರ್ ಹಾಲಹಳ್ಳಿ ಶಿಬಿರವನ್ನು ಯಶಸ್ವಿಯಾಗಿ ಸಂಘಟಿಸಿದರು.

## ದಕ್ಷಿಣ ಕನ್ನಡ

ದಿನಾಂಕ 01-11-2014 ರಂದು ಸ್ಥಳೀಯ ಸಂಸ್ಥೆಯ ಎಕ್ಸಲೆಂಟ್ ವಿಜ್ಞಾನ ಮತ್ತು ವಾಣಿಜ್ಯ ಪದವಿ ಪೂರ್ವ ಕಾಲೇಜು, ಕಲ್ಲಬೆಟ್ಟು, ಮೂಡುಬಿದಿರೆ ಇಲ್ಲಿಯ ವಾಣಿಜ್ಯ ವಿಭಾಗದ ರೋವರ್ಸ್ ಮತ್ತು ರೇಂಜರ್ಸ್ ರವರಿಂದ ಚಾರಣ ಮತ್ತು ಸ್ವಚ್ಛತಾ ಅಭಿಯಾನವನ್ನು ಆಚರಿಸಲಾಯಿತು. ನರಹರಿ ಪರ್ವತ ಹಾಗೂ ಕಾರಿಂಜ ದೇವಾಲಯಕ್ಕೆ ಭೇಟಿಯಿತ್ತು. ಅಲ್ಲಿನ ಪರಿಸರವನ್ನು ಶುಚಿಗೊಳಿಸುವ ಕಾರ್ಯವನ್ನು ಕೈಗೊಂಡರು. ಸ್ಕೌಟ್ಸ್ - ಗೈಡ್ಸ್‌ಗಳ ಮಾರ್ಗದರ್ಶಕರಾಗಿ ರೇಂಜರ್ಸ್ ಲೀಡರ್ ಶ್ರೀಮತಿ ದಯಾವತಿ, ರೋವರ್ಸ್ ಲೀಡರ, ಶ್ರೀ ಪ್ರಜ್ವಲ್, ಉಪನ್ಯಾಸಕಿ ಶ್ರೀಮತಿ ಸಂಧ್ಯಾ, ಶ್ರೀ ಕಾರ್ತಿಕ್ ರವರು ಭಾಗವಹಿಸಿದ್ದರು.

* ದಿನಾಂಕ 03-11-2014 ರಂದು ಮೂಡುಬಿದಿರೆಯ ಎಕ್ಸಲೆಂಟ್ ಪ.ಪೂ. ಕಾಲೇಜಿನಲ್ಲಿ ರೋವರ್ಸ್-ರೇಂಜರ್ಸ್ ಘಟಕದ ಉದ್ಘಾಟನಾ ಕಾರ್ಯಕ್ರಮ ನಡೆಯಿತು. ಈ ಕಾರ್ಯಕ್ರಮದಲ್ಲಿ ರಾಜ್ಯ ಸಹಾಯಕ ಸಂಘಟನಾ ಆಯುಕ್ತರಾದ ಶ್ರೀ ಪ್ರಭಾಕರ್ ಭಟ್ ಅವರು ದೀಪ ಬೆಳಗಿಸಿ, ಪ್ರತಿಜ್ಞೆಯನ್ನು ಬೋಧಿಸಿದರು ಮತ್ತು ಬೇಡನ್ ಪೋವೆಲ್ ಅವರ ಆಶಯದ ಪ್ರಕಾರವಾಗಿ ರೋವರ್ಸ್-ರೇಂಜರ್ಸ್ ತಮ್ಮ ಸಮುದಾಯದ ಶಕ್ತಿ ಸಾಮರ್ಥ್ಯಗಳಿಗೆ ಶಿಸ್ತು, ಸಂಘಟನೆ ಮತ್ತು ಸೇವೆಯನ್ನು ಕೊಡಬೇಕೆಂದು ನುಡಿದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಕೃಷ್ಣಮೂರ್ತಿ ಅವರು ತಮ್ಮೆಲ್ಲರ ಪ್ರೋತ್ಸಾದಿಂದ ಹೊಸದಾಗಿ ರೋವರ್ಸ್-ರೇಂಜರ್ಸ್ ಘಟಕಗಳು ಪ್ರಾರಂಭಿಸಿರುವುದಕ್ಕೆ ಅಭಿನಂದನೆಯನ್ನು ಸಲ್ಲಿಸಿದರು. ಸಂಸ್ಥೆಯ ಅಧ್ಯಕ್ಷರಾದ ಶ್ರೀ ಯುವರಾಜ್ ಜೈನ್ ಶುಭ ಹಾರೈಸಿದರು. ಕಾರ್ಯದರ್ಶಿ ಶ್ರೀಮತಿ ರಶ್ಮಿತಾ ಜೈನ್, ಉಪಪ್ರಾಂಶುಪಾಲ ಶ್ರೀ ರವೀಂದ್ರನಾಥ ಬರ್ವೆ, ವಾಣಿಜ್ಯ ವಿಭಾಗದ ಡೀನ್ ಶ್ರೀ ರಚನ್, ರೋವರ್ಸ್ ಲೀಡರ್ ಶ್ರೀ ಪ್ರಜ್ವಲ್ ಉದ್ಘಾಟನಾ ಸಂದರ್ಭದ ವೇದಿಕೆಯಲ್ಲಿ ಉಪಸ್ಥಿತರಿದ್ದರು. ಈ ಕಾರ್ಯಕ್ರಮದಲ್ಲಿ ರೇಂಜರ್ಸ್ ಲೀಡರ್ ಕು. ದಯಾವತಿ ಸ್ವಾಗತಿಸಿದರು. ರೇಂಜರ್ ಕರ್ತವ್ಯ ವಂದಿಸಿದರು. ರೋವರ್ ಆಶಿಕ್ ನಾರಾಯಣ್ ಕಾರ್ಯಕ್ರಮ ನಿರೂಪಿಸಿದರು.

## ಗುಲ್ಬರ್ಗಾ

ಪ್ರತಿಯೊಬ್ಬ ವಿದ್ಯಾರ್ಥಿಗಳು ತಮ್ಮ ಜೀವನದಲ್ಲಿ ಸೇವಾ ಮನೋಭಾವ ಬೆಳಸಿಕೊಳ್ಳಬೇಕು ಎಂದು ರಾಜ್ಯ ಸಭಾ ಸದಸ್ಯರಾದ ಡಾ. ಬಸವರಾಜ ಪಾಟೀಲ ಸೇಡಂ ಹೇಳಿದರು. ಸೇಡಂ ವಿದ್ಯಾಮಂದಿರ ಸಿ.ಬಿ.ಎಸ್.ಇ. ಶಾಲೆಯ ಆವರಣದಲ್ಲಿ ಭಾ.ಸ್ಕೌ.-ಗೈ, ಜಿಲ್ಲಾ ಸಂಸ್ಥೆ ಕಲಬುರಗಿ ಹಾಗೂ ಶ್ರೀ ಕೊತ್ತಲಬಸವೇಶ್ವರ ಭಾರತೀಯ ಶಿಕ್ಷಣ ಸಮಿತಿ ಸೇಡಂ ಇವರ ಸಹಯೋಗದಲ್ಲಿ ನಡೆದ ಕಲಬುರಗಿ ವಿಭಾಗಮಟ್ಟದ ಬುಲ್ ಬುಲ್ಸ್ ಬ್ಯಾಡ್ಜ್ ವರ್ಕ್ ಶಿಬಿರ ಹಾಗೂ ಜಿಲ್ಲಾ ಮಟ್ಟದ ಪಟಾಲಂ ನಾಯಕರ ಶಿಬಿರ ಕಾರ್ಯಕ್ರಮವನ್ನು ಉದ್ಘಾಟಿಸಿ ಅವರು ಮಾತನಾಡುತ್ತಿದ್ದರು.

ಅಧ್ಯಕ್ಷತೆ ವಹಿಸಿದ್ದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಅರ್. ಸಿಂಧ್ಯವರು ಮಾತನಾಡುತ್ತ, ಪರೋಪಕಾರ, ಸೇವಾ ಮನೋಭಾವ, ಶಿಸ್ತು ಇವೆಲ್ಲಾ ಸ್ಕೌಟ್-ಗೈಡ್‌ನ ಉದ್ದೇಶಗಳಾಗಿವೆ. ಇಂದಿನ ಮಕ್ಕಳೇ ನಾಳಿನ ಪ್ರಜೆಗಳು. ಎಲ್ಲರೂ ದೇಶದ ಹಿತಕ್ಕಾಗಿ ದುಡಿಯಬೇಕು. ನಾವು ಮಾಡುವಂತಹ ಆಲೋಚನೆಗಳು ಪರೋಪಕಾರ ಪರರ ಸೇವೆಯದ್ದಾಗಿರಬೇಕು ಎಂದರು.

ಶ್ರೀ ಚಂದ್ರಕಾಂತ್ ರೆಡ್ಡಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಸೇಡಂ, ಡಾ. ಎಸ್.ಆರ್. ಹರವಾಳ ವೈದ್ಯಕೀಯ ಅಧೀಕ್ಷಕರು ಬಸವೇಶ್ವರ ಆಸ್ಪತ್ರೆ ಕಲಬುರಗಿ. ಡಾ. ಉದಯ ಕುಮಾರ ಶಹಾ, ಅಧ್ಯಕ್ಷರು, ಶ್ರೀ ಕೊತ್ತಲಬಸವೇಶ್ವರ ಭಾರತೀಯ ಶಿಕ್ಷಣ ಸಮಿತಿ ಸೇಡಂ. ಅವರು ಮಾತನಾಡಿದರು. ಶ್ರೀ ಎಸ್.ಪಿ. ಸುಳ್ಳದ್, ಜಿಲ್ಲಾ ಆಯುಕ್ತರು (ಸ್ಕೌ) ಸ್ವಾಗತಿಸಿದರು. ಶ್ರೀ ವೀರಭದ್ರಯ್ಯ, ವೈ., ಡಿ.ಓ.ಸಿ., (ಸ್ಕೌ) ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀಮತಿ ಕಮಲಾದೇವಿ. ಎಂ. ಚಿಕ್ಕಮಠ ಅವರು ನಿರೂಪಿಸಿದರು. ಶ್ರೀಮತಿ ಜಯಶ್ರೀ ಗೋಗಿ, ಜಿಲ್ಲಾ ಆಯುಕ್ತರು (ಗೈ) ವಂದನಾರ್ಪಣೆ ಮಾಡಿದರು. ಡಾ. ಶೀಲಾ-ಸಿದ್ಧರಾಮ, ರಾಜ್ಯ ಸಹಾಯಕ ಆಯುಕ್ತರು(ಗೈ) ಕಲಬುರಗಿ ವಿಭಾಗ. ಶ್ರೀ ಚನ್ನವೀರಯ್ಯಸ್ವಾಮಿ,

ಜಿಲ್ಲಾ ಕಾರ್ಯದರ್ಶಿಗಳು, ಶ್ರೀ ಮಲ್ಲಿನಾಥ ಮಠಪತಿ, ಪ್ರಾಚಾರ್ಯರು ವಿದ್ಯಾಮಂದಿರ ಸಿ.ಬಿ.ಎಸ್.ಇ. ಶಾಲೆ ಸೇಡಂ. ಶ್ರೀಮತಿ ನಾಗರತ್ನಾ ಪಾಟೀಲ ಜಿಲ್ಲಾ ಸಂಘಟಕರು. ಜಿಲ್ಲೆಯ ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು.

## ಹಾವೇರಿ

ದಿನಾಂಕ 01-11-2014 ರಂದು ನಡೆದ 59ನೇ ಕನ್ನಡ ರಾಜ್ಯೋತ್ಸವ ಆಚರಣೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ತಂಡಗಳು ಪಥಚಲನೆಯಲ್ಲಿ ಭಾಗವಹಿಸಿ ಜೆ.ಪಿ. ರೋಟರಿ ಪ್ರೌಢಶಾಲೆಯ ಸ್ಕೌಟ್ಸ್ ತಂಡಕ್ಕೆ ಪ್ರಥಮ ಸ್ಥಾನ ಪಡೆದಿರುತ್ತಾರೆ. ಹಾಗು ಕೆ.ಎಲ್.ಇ. ಪ್ರೌಢಶಾಲೆಯ ಗೈಡ್ಸ್ ತಂಡಕ್ಕೆ 2ನೇ ಸ್ಥಾನ ಪಡೆದಿರುತ್ತಾರೆ. ಶ್ರೀ ರಾಮಲಿಂಗಾರೆಡ್ಡಿ, ಮಾನ್ಯ ಸಾರಿಗೆ ಸಚಿವರು, ಕರ್ನಾಟಕ ಸರಕಾರ ಪ್ರಶಸ್ತಿ ಪತ್ರ ಮತ್ತು ಶೀಲ್ಡನ್ನು ನೀಡಿ ಗೌರವಿಸಿದರು. ಕಾರ್ಯಕ್ರಮದಲ್ಲಿ ಮಾನ್ಯ ಶ್ರೀ ರುದ್ರಪ್ಪ ಲಮಾಣಿ ಮಾನ್ಯ ಶಾಸಕರು ಹಾಜರಿದ್ದರು.

* ದಿನಾಂಕ 07-11-2014 ರಂದು ಸಂಸ್ಥಾಪನಾ ದಿನಾಚರಣೆಯನ್ನು ಕೆ.ಎಲ್.ಇ., ಪ್ರೌಢಶಾಲೆ ಹಾವೇರಿಯಲ್ಲಿ ಸಂಘಟಿಸಲಾಯಿತು. ಶ್ರೀ ಜಿ. ಗೋವಿಂದಸ್ವಾಮಿ, ಡೆಪ್ಯೂಟಿ ಸೆಕ್ರೇಟರಿ. ಜಿಲ್ಲಾ ಪಂಚಾಯತ ಹಾವೇರಿಯವರು ದೀಪ ಬೆಳಗಿಸಿ ಕಾರ್ಯಕ್ರಮವನ್ನು ಉದ್ಘಾಟನೆ ಮಾಡಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀಮತಿ ಶಲಿನ್ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀಮತಿ ಮಾಧುರಿ ದೇವಧರ, ಜಿಲ್ಲಾ ಮುಖ್ಯ ಆಯುಕ್ತರು, ಭಾ.ಸ್ಕೌ.ಗೈ. ಜಿ.ಸಂ. ಹಾವೇರಿ. ಶ್ರೀ ಪ್ರಭಾಕರರಾವ್ ಮಂಗಳೂರ ಜಿಲ್ಲಾ ಸ್ಥಾನಿಕ ಆಯುಕ್ತರು, ಶ್ರೀ ವ್ಹಿ.ಸಿ. ಮೊಗಲಿಶೆಟ್ಟರ, ಜಿಲ್ಲಾ ಖಜಾಂಚಿ. ಶ್ರೀ ಶರತ ಮಲ್ಲನಗೌಡ್ರ, ಜಿಲ್ಲಾ ಸ್ಥಾನಿಕ ಆಯುಕ್ತರು, ಭಾಗವಹಿಸಿದ್ದರು.

* ದಿನಾಂಕ 11-11-2014 ರಿಂದ 12-11-2014 ರ ವರೆಗೆ ಸರಕಾರಿ ಪ್ರೌಢಶಾಲೆ ಶಿರಬಡಗಿ, ತಾ: ಸವಣೂರಿನಲ್ಲಿ ಗುಂಪುನಾಯಕರ ತರಬೇತಿ ಶಿಬಿರವನ್ನು ಸಂಘಟಿಸಲಾಯಿತು. ಶಾಲೆಯ ಸಂಸ್ಥಾಪಕರು ಹಾಗು ಅಧ್ಯಕ್ಷರಾದ ಶ್ರೀ ರಾಮಣ್ಣ ಬಸಾಪುರ ರವರು ಗಿಡವನ್ನು ನೆಡುವುದರ ಮುಖಾಂತರ ಶಿಬಿರ ಉದ್ಘಾಟನೆ ಮಾಡಿದರು. ಮುಖ್ಯ ಅತಿಥಿಗಳಾಗಿ ಶ್ರೀ ನಂದೀಶ ಹಾವಣಗಿ, ಅಧ್ಯಕ್ಷರು ಭಾ.ಸ್ಕೌ.ಗೈ. ತಾಲ್ಲೂಕಾ ಸಂಸ್ಥೆ ಸವಣೂರು ಉಪಸ್ಥಿತರಿದ್ದರು. ಶಿಬಿರದಲ್ಲಿ 80 ಸ್ಕೌಟ್ಸ್ ಮತ್ತು 60 ಗೈಡ್ಸ್‌ಗಳು 16 ಸ್ಕೌಟ್ ಮಾಸ್ಟರ್ ಮತ್ತು 10 ಗೈಡ್ ಕ್ಯಾಪ್ಟನ್ನರು ಭಾಗವಹಿಸಿದ್ದರು.

## ಹಾಸನ

ದಿನಾಂಕ 19-11-2014 ರಂದು ಅರಸೀಕೆರೆ ತಾಲ್ಲೂಕಿನ ಕುರುವಂತೆ ಗ್ರಾಮದ ಸ.ಹಿ. ಪ್ರಾ. ಶಾಲೆಯಲ್ಲಿ ಹೊಯ್ಸಳ ಸ್ಕೌಟ್ ಟ್ರೂಪ್ ವತಿಯಿಂದ 'ಸ್ವಚ್ಛತಾ ದಿವಸ'ದ ಅಂಗವಾಗಿ ಶಾಲಾ ಮೈದಾನ, ಗ್ರಾಮದ ರಸ್ತೆಗಳು, ದೇವಾಲಯಗಳ ಆವರಣಗಳನ್ನು ಸ್ವಚ್ಛಗೊಳಿಸಲಾಯಿತು.

ಸಂಜೆ ಗ್ರಾಮದ ಶ್ರೀ ಆಂಜನೇಯ ದೇವಾಲಯದ ಆವರಣದಲ್ಲಿ 'ಭವ್ಯ ಶಿಭಿರಾಗ್ನಿ' ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಗ್ರಾಮದ ಹಿರಿಯ ನಾಗರಿಕರು, ಯುವಕ-ಯುವತಿಯರು. ಪೋಷಕ ವರ್ಗದವರು ಭಾಗವಹಿಸಿದ್ದರು. ಈ ಶಿಬಿರಾಗ್ನಿ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶಾಲಾ ಮುಖ್ಯ ಶಿಕ್ಷಕರೂ ಹಾಗೂ ಸಹಾಯಕ ಜಿಲ್ಲಾ ಆಯುಕ್ತರಾದ ಶ್ರೀ ವಿಷ್ಣುಮೂರ್ತಿ ಭಟ್ ವಹಿಸಿಕೊಂಡಿದ್ದರು. ಮುಖ್ಯ ಅತಿಥಿಗಳಾಗಿ ಜಿಲ್ಲಾ ತರಬೇತಿ ಆಯುಕ್ತ (ಗೈ) ರಾದ ಶ್ರೀಮತಿ ಕಾಮೇಶ್ವರಿ ಭಟ್, ಸ್ಥಳೀಯ ಸಂಸ್ಥೆಯ ಸಹಾಯಕ ಜಿಲ್ಲಾ ಆಯುಕ್ತರುಗಳಾದ ಶ್ರೀ ಬಿ. ಕೆ. ಯೋಗೀಶಾಚಾರ್

ಮತ್ತು ಶ್ರೀ ಜಿ. ಕೆ. ಗಂಗಾಧರ್, ಕಾರ್ಯದರ್ಶಿ ಶ್ರೀ ಜೆ. ಎಲ್. ಲೀಲಾ ಮಹೇಶ್ವರ್ ಭಾಗವಹಿಸಿದ್ದರು. ಸ್ಕೌಟರ್ ಕೆ.ಎಂ. ಸತೀಶ್ ರವರು ಎಲ್ಲಾ ಕಾರ್ಯಕ್ರಮಗಳನ್ನು ಸಂಘಟಿಸಿ ನಡೆಸಿಕೊಟ್ಟರು.

* ದಿನಾಂಕ 22-11-2014 ರಂದು ಅರಸೀಕೆರೆ ತಾಲ್ಲೂಕಿನ ಕಣಕಟ್ಟೆಯ ಶ್ರೀ ವಿದ್ಯಾರಣ್ಯ ವಿದ್ಯಾಸಂಸ್ಥೆ ಪದವಿಪೂರ್ವ ಕಾಲೇಜು ವಿಭಾಗದಲ್ಲಿ 'ಸರ್ದಾರ್ ವಲ್ಲಭಬಾಯ್ ಪಟೇಲ್ ರೋವರ್ಸ್ ಕ್ರ್ಯೂವ್'ನ್ನು ಪ್ರಾರಂಭಿಸಲಾಯಿತು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀಮತಿ ಜೆ.ಎಲ್. ಲೀಲಾಮಹೇಶ್ವರ್, ರೋವರ್ಸ್ ಕ್ರ್ಯೂವ್‌ನ್ನು ಉದ್ಘಾಟಿಸಿ ಶುಭ ಹಾರೈಸಿದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಡಿ.ಟಿ.ಸಿ. (ಗೈ) ಶ್ರೀಮತಿ ಕಾಮೇಶ್ವರಿ ಭಟ್ ರವರು ಸ್ಕೌಟ್ಸ್-ಗೈಡ್ಸ್‌ಗಳಿಗೆ ಹಿತವಚನ ನುಡಿದರು.

ಇದೇ ಕಾರ್ಯಕ್ರಮದಲ್ಲಿ ಸಹಾಯಕ ಜಿಲ್ಲಾ ಆಯುಕ್ತರುಗಳಾದ ಶ್ರೀ ಬಿ.ಕೆ. ಯೋಗೀಶಚಾರ್ ಮತ್ತು ಶ್ರೀ ಜಿ.ಕೆ. ಗಂಗಾಧರ್, ರೋವರ್ ಲೀಡರ್ ಶ್ರೀ ಈಳಗೇರಿ ಪ್ರಕಾಶ್ ಉಪಸ್ಥಿತರಿದ್ದರು. ಕಾಲೇಜು ಪ್ರಾಂಶುಪಲರಾದ ಶ್ರೀ ಶಶಿಕುಮಾರ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು.

* ದಿನಾಂಕ 22-11-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಸ್ಥಳೀಯ ಸಂಸ್ಥೆ, ಅರಸೀಕೆರೆ ವತಿಯಿಂದ ಸ್ಕೌಟ್ಸ್-ಗೈಡ್ಸ್ ಸಪ್ತಾಹದ ಪ್ರಯುಕ್ತ ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದ ಕಾರ್ಯಕ್ರಮದಲ್ಲಿ ಡಿ.ಟಿ.ಸಿ., ಶ್ರೀಮತಿ ಕಾಮೇಶ್ವರಿ ಭಟ್, ಕಾರ್ಯದರ್ಶಿ ಶ್ರೀ ಜೆ.ಎಲ್. ಲೀಲಾಮಹೇಶ್ವರ್, ಮತ್ತಿತರರು ಉಪಸ್ಥಿತರಿದ್ದರು.

* ದಿನಾಂಕ 04-12-2014ರಂದು ಶ್ರೀ ವೆಂಕಟೇಶ್ವರ ಎಜುಕೇಶನ್ ಟ್ರಸ್ಟ್ (ರಿ.) ಚಿಟ್ಟನಹಳ್ಳಿ ಹೌಸಿಂಗ್ ಬೋರ್ಡ್, ಹೊಳೆ ನರಸೀಪುರ ಶಾಲೆಯಲ್ಲಿ 'ಮಕ್ಕಳ ಸುರಕ್ಷತಾ' ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಈ ಸಪ್ತಾಹದಲ್ಲಿ ಈ ಶಾಲೆಯ "ಸಾಧನಾ ಗೈಡ್" ಕಂಪನಿಯ ಗೈಡ್ಸ್‌ಗಳು ಬೆಳಿಗ್ಗೆ ಚಿಟ್ಟನಹಳ್ಳಿ ಹೌಸಿಂಗ್ ಬೋರ್ಡ್‌ನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆಯ ಮೂಲಕ ಘೋಷಣೆಗಳನ್ನು ಕೂಗುತ್ತಾ ಪಥಚಲನೆ ನಡೆಸಿದರು. ಶ್ರೀಮತಿ ಕುಮುದ ಆರ್. ರವರು ನಾಯಕತ್ವ ವಹಿಸಿದ್ದರು. ಕಾರ್ಯಕ್ರಮಕ್ಕೆ ಶಾಲೆಯ ಮುಖ್ಯೋಪಾಧ್ಯಾಯರಾದ ಚಂದ್ರಶೇಖರ ಬಿ.ಎಸ್. ಮತ್ತು ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅರುಣ್ ಕುಮಾರ್ ರವರು ಹಾಗೂ ಶಾಲಾ ಬೋಧಕ-ಬೋಧಕೇತರರು ಬೆಂಬಲವನ್ನು ನೀಡಿದರು.

## ಕೋಲಾರ

ದಿನಾಂಕ 22-11-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಸ್ಥಳೀಯ ಸಂಸ್ಥೆ ಬಂಗಾರಪೇಟೆ ವತಿಯಿಂದ ಬ್ಯಾಟರಾಯನ ಹಳ್ಳಿ ಬೆಟ್ಟದ ಮೇಲೆ ದ್ವಿತೀಯ ಸೋಪಾನ ಪರೀಕ್ಷಾ ಶಿಬಿರವನ್ನು ಹಮ್ಮಿಕೊಂಡಿದ್ದು ಈ ಪರೀಕ್ಷಾ ಶಿಬಿರದಲ್ಲಿ 6 ಶಾಲೆಗಳಿಂದ 150 ಜನ ಸ್ಕೌಟ್ ಮತ್ತು ಗೈಡ್‌ಗಳು ಭಾಗವಹಿಸಿದ್ದರು. ಶಿಬಿರದಲ್ಲಿ ಸ್ಕೌಟ್ ಮತ್ತು ಗೈಡ್ ಚಟುವಟಿಕೆಗಳ ಬಗ್ಗೆ ತರಬೇತಿ ನೀಡಲಾಯಿತು. ಈ ಶಿಬಿರದ ನಾಯಕರಾಗಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಯಾದ ಶ್ರೀ ನಂಜುಂಡಪ್ಪ ಕಾರ್ಯ ನಿರ್ವಹಿಸಿದರು.

## ಕೊಡಗು

ದಿನಾಂಕ 29-10-2014 ರಿಂದ 31-10-2014 ರ ವರೆಗೆ ನಾಪೋಕ್ಲುವಿನ ಅಂಕುರ್ ಪಬ್ಲಿಕ್ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳ ಪೆಟ್ರೋಲ್ ಲೀಡರ್ ಶಿಬಿರ ನಡೆಸಲಾಯಿತು. ಈ ಶಿಬಿರದಲ್ಲಿ ಶ್ರೀ ಗುಲ್ಮನ್ ಟಿ.ಸಿ., (ಸ್ಕೌಟ್ ಮಾಸ್ಟರ್) ಗೈಡ್ಸ್ ಕ್ಯಾಪ್ಟನ್ ಶ್ರೀಮತಿ ದರ್ಶಿನಿ ಕೆ.ಸಿ. ಮತ್ತು ಸ್ಕೌಟ್ಸ್ ಮಾಸ್ಟರ್ ಶ್ರೀ ಮಹೇಶ್ ಟಿ.ಸಿ. ಅವರು ಭಾಗವಹಿಸಿದ್ದರು. 23 ಸ್ಕೌಟ್ಸ್ ಮತ್ತು 38 ಗೈಡ್ಸ್ ಗಳು ಪಾಲ್ಗೊಂಡಿದ್ದರು.

* ದಿನಾಂಕ 01-11-2014 ರಂದು ಕೊಡಗು ಜಿಲ್ಲೆಯ ಮಡಕೇರಿ ತಾಲ್ಲೂಕಿನ ನಾಪೋಕ್ಲುವಿನ ಅಂಕುರ್ ಪಬ್ಲಿಕ್ ಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ಕನ್ನಡ ರಾಜ್ಯೋತ್ಸವದ ಅಂಗವಾಗಿ ಸ್ವಚ್ಛತಾ ಆಂದೋಲನವನ್ನು ಕೈಗೊಂಡು ತಮ್ಮ ಸುತ್ತಲ ಪರಿಸರವನ್ನು ಸ್ವಚ್ಛ ಮಾಡುವುದರ ಜೊತೆಗೆ ಸಾರ್ವಜನಿಕರಲ್ಲಿ ಪರಸರ ಸ್ವಚ್ಛತೆಯ ಬಗ್ಗೆ ತಿಳುವಳಿಕೆ ಮೂಡಿಸಿದರು. ಶಾಲೆಯ ಅಧ್ಯಕ್ಷರಾದ ಶ್ರೀಮತಿ ರತ್ನಾ ಚರ್ಮಣ, ಕಾರ್ಯದರ್ಶಿ, ಶ್ರೀ ರಾಜಾ ಚರ್ಮಣ, ಮುಖ್ಯೋಪಾಧ್ಯಾಯಿನಿಯವರಾದ ಶ್ರೀಮತಿ ಆಶಾ ಅಕ್ಕಮ್ಮ, ಗೈಡ್ಸ್ ಕ್ಯಾಪ್ಟನ್ ಶ್ರೀಮತಿ ದರ್ಶಿನಿ ಕೆ.ಸಿ., ಸ್ಕೌಟ್ ಮಾಸ್ಟರ್ ಶ್ರೀ ಮಹೇಶ್ ಟಿ.ವಿ. ಹಾಗೂ ಇತರ ಸಹ ಶಿಕ್ಷಕರು ಈ ಆಂದೋಲನದಲ್ಲಿ ಭಾಗವಹಿಸಿದ್ದರು.

## ಕೊಪ್ಪಳ

ದಿನಾಂಕ 01-11-2014 ರಂದು ಕನ್ನಡ ರಾಜ್ಯೋತ್ಸವದ ಅಂಗವಾಗಿ ಸ್ಕೌಟ್ಸ್-ಗೈಡ್ಸ್‌ಗಳು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ ಹಾಗೂ ಸಾರ್ವಜನಿಕ ಮೈದಾನದಲ್ಲಿ ಪರೇಡ್‌ನಲ್ಲಿ ಭಾಗವಹಿಸಿರುತ್ತಾರೆ.

* ದಿನಾಂಕ 07-11-2014 ರಂದು ಸಂಸ್ಥಾಪನಾ ದಿನಾಚರಣೆಯನ್ನು ಸ್ಕೌಟ್ಸ್-ಗೈಡ್ಸ್‌ಗಳೊಂದಿಗೆ ಶಾರದಾ ಪ್ರೌಢಶಾಲೆಯಲ್ಲಿ ಆಚರಿಸಲಾಯಿತು.

* ದಿನಾಂಕ 08-11-2014 ರಂದು ಕನಕದಾಸರ ಜಯಂತಿಯ ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ ಹಾಗೂ ಜಿಲ್ಲಾಡಳಿತದಿಂದ ನಡೆದ ಮೆರವಣಿಗೆಯಲ್ಲಿ ಭಾಗವಹಿಸಿರುತ್ತಾರೆ.

* ದಿನಾಂಕ 14-11-2014 ರಂದು ಮಕ್ಕಳ ದಿನಾಚರಣೆಯನ್ನು ಶಾರದಾ ಪ್ರೌಢಶಾಲೆಯಲ್ಲಿ ಆಚರಿಸಲಾಯಿತು. ಶಾರದಾ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳಿಂದ ಮನರಂಜನಾ ಕಾರ್ಯಕ್ರಮ ಜರುಗಿದವು.

ನಂತರ ಜಿಲ್ಲಾ ಕಾರ್ಯದರ್ಶಿ ಮಾತನಾಡುತ್ತಾ ಎಳೆಯ ಸ್ಕೌಟ್ಸ್-ಗೈಡ್ಸ್‌ಗಳು ಎಲ್ಲಿಯ ವರೆಗೆ ಇರುವರೋ ಅಲ್ಲಿಯ ವರೆಗೆ ನಾವು ಎಂದು ಹೇಳಿದರು. ಶಾರದಾ ಶಾಲೆಯ ಎಲ್ಲಾ ಸಿಬ್ಬಂದಿವರ್ಗ ಭಾಗವಹಿಸಿದ್ದರು.

* ದಿನಾಂಕ 15-11-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಗಂಗಾವತಿ ಸ್ಥಳೀಯ ಸಂಸ್ಥೆಯ ರ್‍ಯಾಲಿಯನ್ನು 250 ಸ್ಕೌಟ್ಸ್-ಗೈಡ್ಸ್‌ಗಳೊಂದಿಗೆ ಆಚರಿಸಲಾಯಿತು. ರ್‍ಯಾಲಿಯಲ್ಲಿ ಸ್ವಚ್ಛತಾ ಆಂದೋಲನದ ಅರಿವನ್ನು ಜನತೆಯಲ್ಲಿ ಮೂಡಿಸಲಾಯಿತು.

* ದಿನಾಂಕ 16-11-2014 ರಂದು ಸ್ಕೌಟ್ಸ್-ಗೈಡ್ಸ್ ಕಟ್ಟಡದ ಮೇಲಂತಸ್ತಿನ ಉದ್ಘಾಟನೆಯನ್ನು ಮಾನ್ಯ ಮಾಜಿ ಸಂಸದರಾದ ಶ್ರೀ ಶಿವರಾಮೇಗೌಡ, ಮಾನ್ಯ ರಾಜ್ಯ ಪ್ರಧಾನ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ಮಾನ್ಯ ರಾಜ್ಯ

ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರವರು ನೆರವೇರಿಸಿದರು. ಸ್ಥಳೀಯ ಸಂಸ್ಥೆ ಚೇರ್‌ಮನ್ನರಾದ ಮಾನ್ಯ ಶ್ರೀ ಮಲ್ಲಪ್ಪ ಬೆಂಚಮಟ್ಟಿ, ಜಿಲ್ಲಾ ಕಾರ್ಯದರ್ಶಿ, ಮಾನ್ಯ ಮಲ್ಲಿಕಾರ್ಜುನ ಚಾಕಿಮಠ, ಶಾಸಕರಾದ ಶ್ರೀ ಶರಣಪ್ಪ ಮಂಟೂರ, ಮಾನ್ಯ ಮಾಜಿ ಶಾಸಕರಾದ ಶ್ರೀ ಪರಣ್ಣ ಮುನವಳ್ಳಿ, ಹಾಗೂ ಸ್ಥಳೀಯ ಸಂಸ್ಥೆಯ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.

## ಮಂಡ್ಯ

ದಿನಾಂಕ 07-11-2014 ರಂದು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಮೀರಾ ಶಿವಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ಮಂಡ್ಯದ ಮಾಂಡವ್ಯ ಶಾಲೆಯಲ್ಲಿ ಧ್ವಜ ದಿನಾಚರಣೆಯನ್ನು ಆಚರಿಸಲಾಯಿತು. ಈ ಸಮಾರಂಭದಲ್ಲಿ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸ್ಕೌಟರ್ ಮತ್ತು ಗೈಡರ್‌ಗಳು ಪಾಲ್ಗೊಂಡಿದ್ದರು. ಈ ದಿನಾಚರಣೆಯ ಅಂಗವಾಗಿ ಸ್ವಚ್ಚತಾ ಕಾರ್ಯಕ್ರಮವನ್ನು ಸ್ಕೌಟ್ಸ್-ಗೈಡ್ಸ್‌ಗಳು ಕೈಗೊಂಡು ಶಾಲಾ ಆವರಣ ಹಾಗೂ ಸುತ್ತಮುತ್ತಲಿನ ಪ್ರದೇಶವನ್ನು ಸ್ವಚ್ಛಗೊಳಿಸಿದರು. ಶ್ರೀಮತಿ ಮೀರಾ ಶಿವಲಿಂಗಯ್ಯನವರು ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು.

ಪ್ರತಿ ತಾಲ್ಲೂಕು ಕೇಂದ್ರಗಳಲ್ಲಿಯೂ ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸ್ಕೌಟರ್ ಮತ್ತು ಗೈಡರ್‌ಗಳಿಗೆ ಒಂದು ದಿನದ ಕಾರ್ಯಾಗಾರವನ್ನು ನಡೆಸಲಾಯಿತು.

## ಮೈಸೂರು

ದಿನಾಂಕ 07-11-2014 ರಂದು ಚತುರ್ಥ ಚರಣ್ ಮತ್ತು ಹೀರಕ್ ಪಂಕ್, ಕಬ್ಸ್ ಮತ್ತು ಬುಲ್ ಬುಲ್ಸ್ ಪರೀಕ್ಷಾ ಶಿಬಿರ ಮೈಸೂರಿನಲ್ಲಿ ನೆರವೇರಿತು. 51 ಕಬ್ಸ್ ಮತ್ತು 57 ಬುಲ್ ಬುಲ್ಸ್ ಈ ಶಿಬಿರದಲ್ಲಿ ಪಾಲ್ಗೊಂಡಿದ್ದರು. ಶ್ರೀಮತಿ ರಾಧಮ್ಮ ಕಬ್ಸ್ ವಿಭಾಗಕ್ಕೆ ನಾಯಕಿಯರಾಗಿದ್ದರು. ಈ ಸಂದರ್ಭದಲ್ಲಿ ಧ್ವಜ ದಿನಾಚರಣೆ ಅಂಗವಾಗಿ ಧ್ವಜ ಚೀಟಿಗಳನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಪಿ. ವಿಶ್ವನಾಥ್ ಬಿಡುಗಡೆ ಮಾಡಿದರು.

* ದಿನಾಂಕ 07-11-2014 ರಂದು ದಕ್ಷಿಣ ವಲಯ ಸ್ಥಳೀಯ ಸಂಸ್ಥೆ ವತಿಯಿಂದ ಸ್ಕೌಟ್-ಗೈಡ್ ಸಪ್ತಾಹವನ್ನು ನೆರವೇರಿಸಲಾಯಿತು. ಈ ಸಪ್ತಾಹದ ಅಂಗವಾಗಿ ದಿನಾಂಕ 08-11-2014 ರಂದು ಗೋಪಾಲಸ್ವಾಮಿ ಶಿಶುವಿಹಾರ ಪ್ರೌಢಶಾಲೆಯಲ್ಲಿ ಸರ್ವಧರ್ಮ ಪ್ರಾರ್ಥನೆ ಮತ್ತು ಸ್ವಚ್ಛತಾ ಕಾರ್ಯಕ್ರಮವನ್ನು ನೆರವೇರಿಸಲಾಯಿತು.

* ದಿನಾಂಕ 12-11-2014 ರಿಂದ 18-11-2014 ರ ವರೆಗೆ ಮೈಸೂರಿನ ಶ್ರೀ ಜಯಚಾಮರಾಜೇಂದ್ರ ಸ್ಕೌಟ್ ಮತ್ತು ಗೈಡ್ ಭವನದಲ್ಲಿ ಸ್ಕೌಟ್ ಮಾಸ್ಟರ್ಸ್, ಕಬ್ ಮಾಸ್ಟರ್ಸ್, ಫ್ಲಾಕ್ ಲೀಡರ್ಸ್ ಮತ್ತು ಗೈಡ್ ಕ್ಯಾಪ್ಟನ್‌ಗಳ ಮೂಲ ತರಬೇತಿ ಶಿಬಿರ ನಡೆಯಿತು. 10 ಗೈಡ್ ಕ್ಯಾಪ್ಟನ್ಸ್, 8 ಫ್ಲಾಕ್ ಲೀಡರ್ಸ್ ಮತ್ತು 7 ಕಬ್ ಮಾಸ್ಟರ್ಸ್ ಶಿಬಿರಾರ್ಥಿಗಳಾಗಿದ್ದರು. ಶ್ರೀ ಮಹದೇವಯ್ಯ ಎ.ಎಲ್.ಟಿ.(ಎಸ್) ಸ್ಕೌಟ್ ವಿಭಾಗಕ್ಕೆ, ಗೈಡ್ ವಿಭಾಗಕ್ಕೆ ಮತ್ತು ಶ್ರೀಮತಿ ನಾಗರತ್ನಮ್ಮ ಎ.ಎಲ್.ಟಿ.(ಬಿ.) ಫ್ಲಾಕ್ ವಿಭಾಗಕ್ಕೆ ನಾಯಕರಾಗಿದ್ದರು. ದಿನಾಂಕ 13-11-2014 ಶಿಬಿರವನ್ನು ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಪಿ.

ವಿಶ್ವನಾಥ್ ರವರು ಉದ್ಘಾಟಿಸಿ, ಶಿಬಿರಾರ್ಥಿಗಳಿಗೆ ಶುಭವನ್ನು ಕೋರಿದರು. ಅದೇ ದಿನ ಸಂಜೆ 6.30 ಕ್ಕೆ ನಡೆದ ಭವ್ಯ ಶಿಭಿರಾಗ್ನಿ ಕಾರ್ಯಕ್ರಮದಲ್ಲಿ ಡಾ॥ ಪಿ.ವಿ. ರತ್ನ ಅರಸ್, ಮುಖ್ಯ ಅತಿಥಿಗಳಾಗಿದ್ದರು.

## ರಾಯಚೂರು

ದಿನಾಂಕ 07-11-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ವತಿಯಿಂದ ಜಿಲ್ಲಾಧಿಕಾರಿಗಳ ಕಾರ್ಯಾಲಯದಲ್ಲಿ "ಸ್ಕೌಟ್ ಸಂಸ್ಥಾಪನಾ ದಿನಾಚರಣೆಯ ಧ್ವಜಚೀಟಿ ಬಿಡುಗಡೆ ಹಾಗು ಸ್ಕೌಟ್ ಸಪ್ತಾಹ ಅಂಗವಾಗಿ ಸ್ವಚ್ಛ ಭಾರತ್ ಅಭಿಯಾನ ಜಾಗೃತಿ ಜಾಥ"ವನ್ನು ಹಮ್ಮಿಕೊಳ್ಳಲಾಗಿತ್ತು. ಮುಖ್ಯ ಅತಿಥಿಗಳಾಗಿ ಗೌರವಾನ್ವಿತ ಜಿಲ್ಲಾಧಿಕಾರಿಗಳಾದ ಮಾನ್ಯ ಶ್ರೀ ಎಸ್. ಸಸಿಕಾಂಥ ಸೆಂಥಿಲ್ ಇವರು ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು.

ಈ ಸಂದರ್ಭದಲ್ಲಿ ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಬಸವರಾಜ ಬೊರಡ್ಡಿ, ಜಿಲ್ಲಾ ದೈಹಿಕ ಶಿಕ್ಷಣಾಧಿಗಳು, ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು(ಗೈ) ಶ್ರೀ ಹೆಚ್. ಹನುಮಂತಪ್ಪ ಜಿಲ್ಲಾ ಕಾರ್ಯದರ್ಶಿಗಳು, ಶ್ರೀಮತಿ ಕೆ. ಆಲೀಯಾಖಾನಂ ಖಜಾಂಚಿಗಳು, ಶ್ರೀಮತಿ ದಾನಮ್ಮ ಜಿಲ್ಲಾ ಸ್ಥಾನಿಕ ಆಯುಕ್ತರು, ಹಾಗೂ ವಿವಿಧ ಶಾಲೆಯ 150ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

* ದಿನಾಂಕ 08-11-2014 ರಂದು ಸ್ಕೌಟ್ಸ್-ಗೈಡ್ಸ್ ರೋವರ್ಸ್-ರೇಂಜರ್ಸ್‌ಗಳಿಗೆ ಹೊರ ಸಂಚಾರ ಮತ್ತು ಚಾರಣ ಶಿಬಿರವನ್ನು ಕೋಳಂಕಿ ಅರಣ್ಯದಲ್ಲಿ ಏರ್ಪಡಿಸಲಾಗಿತ್ತು. ಈ ಶಿಬಿರದಲ್ಲಿ ಸುಮಾರು 75 ಸ್ಕೌಟ್ಸ್-ಗೈಡ್ಸ್, ರೋವರ್ಸ್- ರೇಂಜರ್ಸ್‌ಗಳು ಭಾಗವಹಿಸಿದ್ದರು. ಈ ಶಿಬಿರದ ನಾಯಕರಾಗಿ ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು(ಗೈ), ಶ್ರೀಮತಿ ಕೆ. ಅಲೀಯಾಖಾನಂ ಖಜಾಂಚಿ ಇವರುಗಳು ಕಾರ್ಯ ನಿರ್ವಹಿಸಿದರು.

* ದಿನಾಂಕ 10-11-2014 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳಿಗೆ ಚಿತ್ರಕಲಾ ಸ್ಪರ್ಧೆಯನ್ನು ಏರ್ಪಡಿಸಲಾಯಿತು. ಈ ಸ್ಪರ್ಧೆಯಲ್ಲಿ ವಿವಿಧ ಶಾಲಾ-ಕಾಲೇಜುಗಳ 67 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

* ದಿನಾಂಕ 11-11-2014 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳಿಗೆ ರಸಪ್ರಶ್ನೆ ಸ್ಪರ್ಧೆ ಹಾಗು ಅಡುಗೆ ಸ್ಪರ್ಧೆಗಳನ್ನು ಏರ್ಪಡಿಸಲಾಯಿತು. ಈ ಸ್ಪರ್ಧೆಯಲ್ಲಿ ಸುಮಾರು 150ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಪಾಲ್ಗೊಂಡಿದ್ದರು.

* ದಿನಾಂಕ 12-11-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ವತಿಯಿಂದ ಸ್ಕೌಟ್ ಸಪ್ತಾಹ ಮತ್ತು ಸ್ವಚ್ಛ ಭಾರತ್ ಅಭಿಯಾನ ಅಂಗವಾಗಿ ರಾಯಚೂರು ನಗರ ಕೇಂದ್ರ ಬಸ್ ನಿಲ್ದಾಣದಲ್ಲಿ ಸ್ವಚ್ಛತಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಈ ಕಾರ್ಯಕ್ರಮವನ್ನು ಮಾನ್ಯ ಶ್ರೀ ಸಂತೋಷಕುಮಾರ ವಿಭಾಗೀಯ ಆಯುಕ್ತರು ಈ. ಕ.ರಾ.ರ.ಸಾ.ಸಂ. ರಾಯಚೂರು ಇವರು ಉದ್ಘಾಟಿಸಿ ಚಾಲನೆ ನೀಡಿದರು. ಈ ಅಭಿಯಾನದಲ್ಲಿ ನಗರದ ವಿವಿಧ ಶಾಲೆಗಳಿಂದ 100 ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಪಾಲ್ಗೊಂಡಿದ್ದರು.

* ದಿನಾಂಕ 13-11-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ "ಸ್ಕೌಟ್ ಸಪ್ತಾಹ" ಸಮಾರೋಪ ಸಮಾರಂಭವನ್ನು ಜಿಲ್ಲಾ ಸ್ಕೌಟ್ ಭವನದಲ್ಲಿ ಹಮ್ಮಿಕೊಳ್ಳಲಾಯಿತು. ಸಮಾರೋಪ ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಶ್ರೀಮತಿ ಸುಧಾ, ಎಮ್. ಅಧೀಕ್ಷಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ರಾಯಚೂರು ಇವರು ಭಾಗವಹಿಸಿ ವಿವಿಧ ಸ್ಪರ್ಧೆಗಳಲ್ಲಿ ವಿಜೇತರಾದ ಸ್ಕೌಟ್ಸ್-ಗೈಡ್ಸ್ ರೋವರ್ಸ್-ರೇಂಜರ್ಸ್‌ಗಳಿಗೆ ಬಹುಮಾನ ಹಾಗೂ ಪ್ರಶಸ್ತಿ ಪತ್ರಗಳನ್ನು ವಿತರಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು.

## ಶಿವಮೊಗ್ಗ

ದಿನಾಂಕ: 08-11-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಭದ್ರಾವತಿ ಆಶ್ರಯದಲ್ಲಿ "ಸಂಸ್ಥಾಪನಾ ದಿನಾಚರಣೆ" ಕಾರ್ಯಕ್ರಮವನ್ನು "ಸ್ಟಾಂಪ್" ಗಳನ್ನು ಬಿಡುಗಡೆ ಗೊಳಿಸುವ ಮುಖಾಂತರ ತಾಲ್ಲುಕು ಕಛೇರಿಯಲ್ಲಿ ತಹಶಿಲ್ದಾರರಾದ ಮಾನ್ಯಶ್ರೀ ರಾಮಚಂದ್ರಪ್ಪನವರು ನೆರವೇರಿಸಿದರು. ಈ ಕಾರ್ಯಕ್ರಮದಲ್ಲಿ ಉಪ-ತಹಶೀಲ್ದಾರರಾದ ಶ್ರೀಯುತ ಶಿವಕುಮಾರ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರಾದ ಶ್ರೀಮತಿ ಪಿ. ಪದ್ಮಾವತಿಯವರು. ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಎನ್. ನಾರಾಯಣಪ್ಪ, ಕಾರ್ಯದರ್ಶಿಯವರಾದ ಶ್ರೀ ಜಿ.ಟಿ. ಗುರುಲಿಂಗಪ್ಪನವರು ಹಾಗೂ ಸ್ಕೌಟ್ಸ್-ಗೈಡ್ಸ್ ಶಿಕ್ಷಕರು ಭಾಗವಹಿಸಿರುತ್ತಾರೆ.

* ದಿನಾಂಕ 25-11-2014ರಂದು 3ನೇ ವಲಯ ಮಟ್ಟದ ಶಿಬಿರವನ್ನು ಸ.ಹಿ.ಪ್ರಾ. ಶಾಲೆ. ಹೊಸಮನೆ, ಭದ್ರಾವತಿಯಲ್ಲಿ ಹಮ್ಮಿಕೊಂಡಿದ್ದು. ಬೆಳಿಗ್ಗೆ 10.30ಕ್ಕೆ ಧ್ವಜಾರೋಹಣದ ನಂತರ ಕಾರ್ಯಕ್ರಮ ಪ್ರಾರಂಭವಾಯಿತು. ಕಾರ್ಯದರ್ಶಿ ಶ್ರೀ ಜಿ.ಪಿ. ಗುರುಲಿಂಗಪ್ಪ ಎಲ್ಲರನ್ನು ಸ್ವಾಗತಿಸಿದರು. ಶಿಬಿರದ ಉದ್ಘಾಟನೆಯನ್ನು ಶಾಲೆಯ ಮುಖ್ಯೋಪಾಧ್ಯಾಯಿನಿ ಶ್ರೀಮತಿ ಕಮಲಾಕ್ಷಿ ಕಾಂಬಳೆ. ನೆರವೇರಿಸಿದರು. ಶ್ರೀಮತಿ ಪದ್ಮಾವತಿ ಜಿಲ್ಲಾ ಉಪಾಧ್ಯಕ್ಷೆ ಅಧ್ಯಕ್ಷತೆ ವಹಿಸಿದ್ದರು. ಶ್ರೀ ರಾಮ್ ಸಿಂಗ್ ಸಂಚಾಲಕರಾಗಿದ್ದರು. ಶ್ರೀ ಎನ್.ಆರ್. ಪ್ರಕಾಶ್ ಸಹ ಕಾರ್ಯದರ್ಶಿ, ಶ್ರೀ ಹೆಚ್. ಶಿವಶಂಕರ್ ಜಿಲ್ಲಾ ತರಬೇತಿ ಆಯುಕ್ತರು ಭಾಗವಹಿಸಿದ್ದರು.

ಶ್ರೀ ಹೆಚ್. ಶಿವಶಂಕರ್ ಸಮಾವೇಶದ ನಾಯಕತ್ವ ವಹಿಸಿಕೊಂಡಿದ್ದರು. ಒಟ್ಟು 15 ಶಾಲೆಯಿಂದ 90 ಸ್ಕೌಟ್ಸ್ 96 ಗೈಡ್ಸ್, 03 ರೇಂಜರ್, 09 ಸ್ಕೌಟರ್, 07 ತಂಡಗಳನ್ನಾಗಿ ವಿಭಾಗಿಸಿ ಪ್ರವೇಶದಿಂದ ತೃತೀಯ ಸೋಪಾನದ ವರೆಗೆ ಸ್ಕೌಟ್ಸ್-ಗೈಡ್ಸ್‌ಗಳಿಗೆ ತರಬೇತಿ ನೀಡಲಾಯಿತು.

## ತುಮಕೂರು

ದಿನಾಂಕ 01-11-2014 ರಂದು ಜಿಲ್ಲಾಡಳಿತ ವತಿಯಿಂದ ನಡೆದ ಕನ್ನಡ ರಾಜ್ಯೋತ್ಸವ ಪಥ ಸಂಚಲನದಲ್ಲಿ 4 ಸ್ಕೌಟ್ಸ್ ಮತ್ತು 4 ಗೈಡ್ಸ್ ದಳಗಳು ಭಾಗವಹಿಸಿದ್ದವು.

* ದಿನಾಂಕ 07-11-2014 ರಂದು ಫೌಂಡೇಷನ್ ಡೇ ಯನ್ನು ಜಿಲ್ಲಾ ಸಂಸ್ಥೆ ಕಛೇರಿಯಲ್ಲಿ ನಡೆಸಲಾಯಿತು. ಶ್ರೀ ವೇಣುಗೋಪಾಲ್ ಕೃಷ್ಣ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀಮತಿ ಶುಭಾಷಿಣಿ ಆರ್. ಕುಮಾರ್ ಜಿಲ್ಲಾ ಆಯುಕ್ತರು

(ಗೈಡ್ಸ್) ಶ್ರೀ ಸುರೇಂದ್ರ ಷಾ ಜಿಲ್ಲಾ ಕಾರ್ಯದರ್ಶಿ, ಇತರೆ ಪದಾಧಿಕಾರಿಗಳು, ಶಿಕ್ಷಕ-ಶಿಕ್ಷಕಿಯರು ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾಡಳಿತ ಮತ್ತು ಭಾರತೀಯ ರೆಡ್‌ಕ್ರಾಸ್ ವತಿಯಿಂದ ನಡೆಸಿದ ಮಧುಮೇಹ ರ್‍ಯಾಲಿಯಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ದಿನಾಂಕ 07-11-2014 ರಂದು ಧ್ವಜ ದಿನಾಚರಣೆಯನ್ನು ಮಾನ್ಯ ಶಾಸಕರಾದ ಶ್ರೀ ಎಸ್.ಆರ್. ಶ್ರೀನಿವಾಸ್, ಗ್ರಾಮಸ್ಥರು ಎಸ್.ಡಿ.ಎಂ.ಸಿ., ಅಧ್ಯಕ್ಷರು ಮತ್ತು ಮುಖ್ಯೋಪಾಧ್ಯಾಯರ ಸಮ್ಮುಖದಲ್ಲಿ ನೆರವೇರಿಸಲಾಯಿತು. ಪಂಚಾಯಿತಿ ಅನುದಾನದಡಿಯಲ್ಲಿ ಸ್ಕೌಟ್‌ಗಳಿಗೆ ಸಮವಸ್ತ್ರ ವಿತರಿಸಲು ಕ್ರಮ ವಹಿಸುತ್ತೇವೆಂದು ಮಾನ್ಯ ಶಾಸಕರು ವಾಗ್ದಾನವನ್ನು ನೀಡಿದರು. ಎಸ್.ಡಿ.ಎಂ.ಸಿ., ಅಧ್ಯಕ್ಷರಾದ ಶ್ರೀಯುತ ಮಹಾಂತೇಶ್ ರವರು ಸ್ಕೌಟ್-ಗೈಡ್‌ಗಳಿಗೆ ಎಲ್ಲಾ ರೀತಿಯ ಸಹಾಯವನ್ನು ನೀಡುವುದಾಗಿ ಘೋಷಿಸಿದರು.

* ದಿನಾಂಕ 14-11-2014 ರಂದು ಸ॥ಹಿ॥ಪ್ರಾ॥ಶಾಲೆ, ಸೀಗೆಮಳೆ ಹಟ್ಟಿಯಲ್ಲಿ ಉಚಿತ ರಕ್ತಗುಂಪು ಶಿಬಿರವನ್ನು ಬೆಳ್ಳಿ ರಕ್ತನಿಧಿ ಕೇಂದ್ರ ತುಮಕೂರು ಇವರು ನೆರವೇರಿಸಿಕೊಟ್ಟರು. ಎಸ್.ಡಿ.ಎಂ.ಸಿ., ಯ ಎಲ್ಲಾ ಸದಸ್ಯರು 80 ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಗ್ರಾಮದ ಎಲ್ಲಾ ಸಾರ್ವಜನಿಕರೂ ಸಹ ಇದರಲ್ಲಿ ಪಾಲ್ಗೊಂಡಿದ್ದರು. ಸ್ಕೌಟ್‌ಗಳು ಮತ್ತು ಸ್ಕೌಟ್ ಮಾಸ್ಟರ್‌ಗಳಾದ ಶ್ರೀ ಕೆ. ಸಿದ್ಧಪ್ಪ ಮತ್ತು ಶ್ರೀ ರಾಮಚಂದ್ರಯ್ಯ ಎಸ್.ಎಸ್. ಇವರು ಭಾಗವಹಿಸಿದ್ದರು.

* ದಿನಾಂಕ 02-12-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ವತಿಯಿಂದ ಜಿಲ್ಲಾ ರ್‍ಯಾಲಿಯನ್ನು ಹಮ್ಮಿಕೊಳ್ಳಲಾಗಿತ್ತು. ಈ ರ್‍ಯಾಲಿಯಲ್ಲಿ ಸುಮಾರು 750 ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಸದಸ್ಯರು ಭಾಗವಹಿಸಿದ್ದರು. ಈ ರ್‍ಯಾಲಿಯ ಅಧ್ಯಕ್ಷತೆಯನ್ನು ಶ್ರೀ ಬಿ.ಎನ್. ಪ್ರನ್ನಕುಮಾರ್ ವಹಿಸಿದ್ದರು. ಶ್ರೀಮತಿ ಆಶಾ ಪ್ರಸನ್ನ ಕುಮಾರ್ ರವರು ಸ್ಕೌಟ್ಸ್, ಗೈಡ್ಸ್ ಚಳುವಳಿಯ ಬಗ್ಗೆ ಮಾತನಾಡಿದರು. ಈ ರ್‍ಯಾಲಿಯ ಮುಖ್ಯ ಅತಿಥಿಗಳಾದ ಶ್ರೀ ಈಶ್ವರಯ್ಯ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ತುಮಕೂರು, ರ್‍ಯಾಲಿಯನ್ನು ಉದ್ದೇಶಿಸಿ ಮಾತನಾಡಿದರು. ಈ ರ್‍ಯಾಲಿಯಲ್ಲಿ ಶ್ರೀ ವೇಣುಗೋಪಾಲ್‌ಕೃಷ್ಣ, ಶ್ರೀಮತಿ ಸುಭಾಷಿಣಿ ಆರ್. ಕುಮಾರ್ ಜಿಲ್ಲಾ ಆಯುಕ್ತರುಗಳು ಹಾಗೂ ಶ್ರೀ ಸುರೇಂದ್ರ ಷಾ ಎ. ಜಿಲ್ಲಾ ಕಾರ್ಯದರ್ಶಿ ಇವರು ಭಾಗವಹಿಸಿದ್ದರು.

## ಉಡುಪಿ

ರಾಜ್ಯದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿ ಸಂಖ್ಯೆಯನ್ನು 10 ಲಕ್ಷಗಳಿಗೆ ಹೆಚ್ಚಿಸಲು ಗುರಿ ಹಾಕಿಕೊಳ್ಳಲಾಗಿದೆ. ಎಂದು ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಹೇಳಿದ್ದಾರೆ. ಅವರು ಅಲೆವೂರಿನ ಉಡುಪಿ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್, ಕಚೇರಿಗೆ ಭೇಟಿ ನೀಡಿ, ತರಬೇತಿ ಕೇಂದ್ರ ನಿರ್ಮಾಣದ ಕಾಮಗಾರಿ ಪರಿಶೀಲಿಸಿ ಮಾತನಾಡಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಉಪಾಧ್ಯಕ್ಷ ಶ್ರೀ ರಬೀಂದ್ರ ನಾಯಕ್, ರಾಜ್ಯ ಉಪಾಧ್ಯಕ್ಷೆ ಶ್ರೀಮತಿ ಶಾಂತಾ ಆಚಾರ್ಯ, ಜಿಲ್ಲಾ ಮುಖ್ಯ ಆಯುಕ್ತ, ಶ್ರೀ ಕೆ.ಬಿ. ರಾವ್, ಜಿಲ್ಲಾ ಸ್ಕೌಟ್ಸ್ ಆಯುಕ್ತ ಶ್ರೀ ಎಡ್ವಿನ್ ಆಳ್ವ, ಗೈಡ್ಸ್ ಆಯುಕ್ತೆ, ಶ್ರೀಮತಿ ರಾಜಲಕ್ಷ್ಮೀ ಶೆಟ್ಟಿ ಉಪಸ್ಥಿತರಿದ್ದರು.

* ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಕಲ್ಯಾಣಪುರ ಹಾಗು ಟ್ರಿನಿಟಿ ಸೆಂಟ್ರಲ್ ಸ್ಕೂಲ್ ಇವರ ಜಂಟಿ ಸಹಯೋಗದಲ್ಲಿ ಕಲ್ಯಾಣಪುರ ಸ್ಥಳೀಯ ಸಂಸ್ಥೆಯ ಎರಡು ದಿನಗಳ ಸ್ಕೌಟ್-ಗೈಡ್ ರ್‍ಯಾಲಿ ಹಾಗು ಕಬ್ಸ್ ಬುಲ್-ಬುಲ್ ಉತ್ಸವ ಟ್ರಿನಿಟಿ ಸೆಂಟ್ರಲ್ ಸ್ಕೂಲ್‌ನಲ್ಲಿ ಉದ್ಘಾಟನೆಗೊಂಡಿತು. ತಾಲೂಕು ದೈಹಿಕ ಶಿಕ್ಷಣ ಪರಿವೀಕ್ಷಣಾಧಿಕಾರಿ

ಶ್ರೀ ಮಧುಕರ್‌ರವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಶಾಲೆಯ ಪ್ರಾಂಶುಪಾಲರಾದ ರೆ|ಪಾ| ಅನಿಲ್ ಡಿ'ಕೋಸ್ತ ರವರು ಅಧ್ಯಕ್ಷತೆ ವಹಿಸಿದ್ದರು.

ಕಲ್ಯಾಣಪುರ ಪರಿಸರದ ಶಾಲೆಗಳಿಂದ ಸುಮಾರು 200 ವಿದ್ಯಾರ್ಥಿಗಳು ಶಿಬಿರದಲ್ಲಿ ಭಾಗವಹಿಸಿದ್ದರು. ಕಲ್ಯಾಣಪುರ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಸಾಲ್ವದೋರ್ ಕ್ರಾಸ್ತಾ, ಜಿಲ್ಲಾ ಆಯುಕ್ತರಾದ ಶ್ರೀ ಎಡ್ವಿನ್ ಆಳ್ವ,ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಕೊಗ್ಗ ಗಾಣಿಗ, ವನಿತಾ, ಎಮ್. ರಾವ್, ಜಿಲ್ಲಾ ಸಂಘಟಕರಾದ ನಿತಿನ್ ಅಮಿನ್, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಉಮೇಶ್ ಉಪಸ್ಥಿತರಿದ್ದರು. ಶ್ರೀಮತಿ ಪೂರ್ಣಿಮಾರವರು ಶಿಬಿರದ ನಾಯಕತ್ವ ವಹಿಸಿದ್ದರು.

* ದಿನಾಂಕ 28-11-2014 ರಿಂದ 01-12-2014 ರ ವರೆಗೆ ರಾಜ್ಯ ಮಟ್ಟದ 2013-14 ಸಾಲಿನ ಬಾಲಕ-ಬಾಲಕಿಯರ ಕ್ರೀಡಾಕೂಟ ಉಡುಪಿ ಜಿಲ್ಲೆಯಲ್ಲಿ ನಡೆದಿದ್ದು, ಸುಮಾರು 2500 ಕ್ರೀಡಾಳುಗಳು ಭಾಗವಹಿಸಿದ್ದರು. ಈ ಕ್ರೀಡಾಕೂಟದಲ್ಲಿ ಸ್ವಯಂ ಸೇವಕರಾಗಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಉಡುಪಿ ಮತ್ತು ಮಂಗಳೂರಿನ ಸುಮಾರು 150 ರೋವರ್ ರೇಂಜರ್ ವಿದ್ಯಾರ್ಥಿಗಳು ತಮ್ಮ ಸೇವೆಯನ್ನು ನೀಡಿದರು.

ಉಡುಪಿ ಮತ್ತು ಮಂಗಳೂರಿನ 15 ಕಾಲೇಜಿನ ರೋವರ್-ರೇಂಜರ್‌ಗಳು ಭಾಗವಹಿಸಿದ್ದರು. ಈ ಸೇವಾ ಶಿಬಿರದ ನಾಯಕರಾಗಿ ಡಾ. ಜಯರಾಮ್ ಶೆಟ್ಟಿಗಾರ್ ರೋವರ್ ಸ್ಕೌಟ್ ಲೀಡರ್ ಮತ್ತು ರೇಂಜರ್ ಲೀಡರ್‌ಗಳಾದ ಶ್ರೀಮತಿ ಸವಿತ ಜೋಗಿ ಹಾಗೂ ಕುಮಾರಿ ವಿನಯ ಇವರು ಶಿಬಿರದಲ್ಲಿ ಸಹಕರಿಸಿದರು. ಜಿಲ್ಲಾ ಸಂಘಟಕರಾದ ಶ್ರೀ ನಿತಿನ್ ಅಮಿನ್ ಸೇವಾ ಶಿಬಿರವನ್ನು ಸಂಘಟಿಸಿದರು.

**How to Spell "BADEN POWEL"**

**Man, Nation Maiden**

**Please Call it BADEN**

**Further for POWEL**

**Rhyme it with NOEL**

# ಮಧುರ ತರಬೇತಿ

ಮಧುರಾ... ಈ ತರಬೇತಿ
ನೋಡಿ ನೋಡಿ ಹರುಷವಾಯ್ತು
ನನಗೀದಿನ ॥ ಈ ಒಲವಿನ ತರಬೇತಿ ॥ಪ॥

ಅಂಜಿಕೆ ಬೇಕಿಲ್ಲ ಎಂದೆಂದು
ಗುರಿಯ ಸಾಧನೆ ಬೇಕೆಂದು
ನಮ್ಮ ಗುರುಗಳ ಆಶೀರ್ವಾದ
ಸ್ಕೌಟ್ ಸಂಸ್ಥೆಯ ಆಶೀರ್ವಾದ
ಇರುವುದು ನಮ್ಮ ಮೇಲೆ ಸದಾ ಸದಾ ॥ಪ॥

ಕೂಡುವುದು ಆಕಸ್ಮಿಕ ನೋಡಿ
ಅಗಲುವುದು ಅನಿವಾರ್ಯ ನೋಡಿ
ನಮ್ಮ ನಾಯಕರ ಆಶೀರ್ವಾದ
ಸ್ಕೌಟ್ ಸಂಸ್ಥೆಯ ಆಶೀರ್ವಾದ
ಇರುವುದು ನಮ್ಮ ಮೇಲೆ ಸದಾ ಸದಾ ॥ಪ॥

ಕಣ್ಣೀರು ಹರಿದಾವ ಗೆಳೆಯರೇ
ಸೇರೋದು ಯಾವಾಗ ಎಂದು
ಬನ್ನಿ ಎಲ್ಲರೂ ಕೂಡೋಣ
ವುಡ್ ಬ್ಯಾಡ್ಜ್‌ನ ತರಬೇತಿಲೀ
ನಮ್ಮ ನೆನಪು ಇರಲಿ ಸದಾ ಸದಾ ॥ಪ॥

ಸ್ಕೌಟ್‌ನ್ನು ಬೆಳಸೋಣ ಅಣ್ಣಂದಿರೇ
ಗೈಡ್ಸ್‌ನ್ನು ಬೆಳೆಸಿರಿ ಅಕ್ಕಂದಿರೇ
ಮರಿಗಳ ಪ್ರಾರ್ಥನೆ
ಮರಿಗಳ ನಿಯಮವ
ಎಂದಾದರೂ ಮರೆಯಲು ಸಾಧ್ಯವೇ ॥ಪ॥

ನಾವೆಲ್ಲ ಕಲಿತೆವು ಕೂಡಿ
ಪರಿಸರದ ಜೊತೆ ಜೊತೆಗೂಡಿ
ಬಿಳಿ ಬಣ್ಣದ ಮರಿಗಳು
ಉತ್ಸಾಹದ ಕಾರಂಜಿಗಳು
ಎಲ್ಲಾ ನಾಯಕರಿಗೆ ನಮಿಸುವೆವು ಸದಾಸದಾ ॥ಪ॥

ರಚನೆ: **ರಾಘವೇಂದ್ರ ಆರ್. ಮಲ್ಲಾಪುರ,** ರಾಯಚೂರು
ಕಬ್‌ಮಾಸ್ಟರ್‌ಗಳ ಮುಂದುವರೆದ ತರಬೇತಿ, ಕೊಂಡಜ್ಜಿ

# ಅಗ್ನಿದೇವನ ಪ್ರಾರ್ಥನೆ

ಓಂ ಓಂ ಓಂ ವಂದನೆ ಅಗ್ನಿದೇವ ಸಜೀವ ।
ಸಕಲ ಜೀವರ ನೀನೇ ಕಾವ॥

ಶಿಬಿರಾರ್ಥಿಗಳಿಗೆಲ್ಲ ನೀನೇ ಜೀವ ।
ಸ್ಕೌಟ್-ಗೈಡ್ ರಂಜನೆಗೆ ಸ್ಫೂರ್ತಿಯನೀವ॥

ಕೆಂಪು ಕೇಸರಿ, ಹಳದಿ ಬಣ್ಣದ ಜ್ವಾಲೆ ।
ದಣಿವು ದುಮ್ಮಾನವ ನೋಡಿಸು ಲೀಲೆ ॥೧॥

ಅಷ್ಟ ದಿಕ್ಪಾಲರಲ್ಲಿ ಆಗ್ನೇಯಕಾಧಿಪತಿ
ದುಷ್ಟ ಶಕ್ತಿಗಳನ್ನೆಲ್ಲ ದಹಿಸೆ ಶರಣಾಗತಿ ॥

ಸಂತೋಷ ಸಂಭ್ರಮ ಆನಂದದಾರತಿ ।
ಹರಡಲೆಲ್ಲೆಡೆ ಸ್ಕೌಟ್-ಗೈಡ್ ಕೀರುತಿ ॥೨॥

ರಚನೆ : ಕು॥ **ಪ್ರೇಮಾ ಚಿ. ಮಂಗಳೂರು,** ಎಲ್.ಟಿ.(ಗೈಡ್) ಧಾರವಾಡ, ಬನವಾಸಿ



ದಿನಾಂಕ 1-11-2014ರಂದು ಕನ್ನಡ ರಾಜ್ಯೋತ್ಸವ ಪ್ರಯುಕ್ತ ಹಾವೇರಿಯಲ್ಲಿ ಜರುಗಿದ ಪಥಸಂಚಲನೆಯಲ್ಲಿ ಪ್ರಥಮ ಸ್ಥಾನ ಪಡೆದ ಸ್ಕೌಟ್ಸ್ ತಂಡಕ್ಕೆ ಶ್ರೀ ರಾಮಲಿಂಗಾರೆಡ್ಡಿ, ಮಾನ್ಯ ಸಾರಿಗೆ ಸಚಿವರು, ಕರ್ನಾಟಕ ಸರ್ಕಾರ ಪ್ರಶಸ್ತಿ ಪತ್ರ ಹಾಗೂ ಪಾರಿತೋಷಕವನ್ನು ನೀಡುತ್ತಿರುವುದು.




ಕೋಲಾರ ಜಿಲ್ಲೆ ಅವಣಿಯಲ್ಲಿ ಜರುಗಿದ ರಾಜ್ಯ ಮಟ್ಟದ ರೋವರ್ಸ್-ರೇಂಜರ್ಸ್ ಚಾರಣ ಶಿಬಿರಕ್ಕೆ ಶ್ರೀ ಯು.ಟಿ. ಖಾದರ್, ಮಾನ್ಯ ಆರೋಗ್ಯ ಸಚಿವರು ಹಾಗೂ ಕೋಲಾರ ಜಿಲ್ಲೆ ಉಸ್ತುವಾರಿ ಸಚಿವರು ಬೇಟಿ ನೀಡಿದರು. ಚಿತ್ರದಲ್ಲಿ ಶ್ರೀ ಕೊತ್ತೂರು ಮಂಜುನಾಥ್, ಮಾನ್ಯ ಶಾಸಕರು, ಶ್ರೀಮತಿ ರತ್ನಮ್ಮ ನಂಜೇಗೌಡ, ಜಿ.ಪಂ.ಅಧ್ಯಕ್ಷರು, ಶ್ರೀ ಡಿ.ಎಲ್. ನಾಗರಾಜ್, ಶ್ರೀ ಕೆ.ವಿ. ಶಂಕರಪ್ಪ, ಜಿ.ಮು.ಆ ಹಾಗೂ ಇತರರರನ್ನು ಕಾಣಬಹುದು.



ದಿನಾಂಕ 19-12-2014ರಂದು ಉಡುಪಿ ಜಿಲ್ಲೆ ಕಾರ್ಕಳದಲ್ಲಿ ಜರುಗಿದ ಸ್ಕೌಟ್ಸ್-ಗೈಡ್ಸ್ ರ್‍ಯಾಲಿಯನ್ನು ಶ್ರೀಮತಿ ಶಾಂತ ವಿ. ಆಚಾರ್ಯ, ಉಪಾಧ್ಯಕ್ಷರು, ಭಾ.ಸ್ಕೌ&ಗೈ, ಕರ್ನಾಟಕ ಉದ್ಘಾಟಿಸುತ್ತಿರುವುದು. ಚಿತ್ರದಲ್ಲಿ ಶಾಲಾ ಪ್ರಾಂಶುಪಾಲರಾದ ಫಾದರ್ ಜಾನ್ ಎ. ಬಮೋಜ ಹಾಗೂ ಇತರ ಪದಾಧಿಕಾರಿಗಳನ್ನು ಕಾಣಬಹುದು.



ದಿನಾಂಕ 6.12.14ರಂದು ಬೆಂಗಳೂರು ಉತ್ತರಜಿಲ್ಲೆಯ ಶಿವಾಜಿನಗರ ಸ್ಥಳಿಯ ಸಂಸ್ಥೆಯ ಆಶ್ರಯದಲ್ಲಿ ಜರುಗಿದ ಮೇಳವನ್ನು ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಉದ್ಘಾಟಿಸುತ್ತಿರುವುದು. ಚಿತ್ರದಲ್ಲಿ ರಾಜ್ಯ ಸಂಸ್ಥೆ ಉಪಾಧ್ಯಕ್ಷರುಗಳಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಶ್ರೀ ಟಿ.ಎಸ್. ಲೂಕಾಸ್, ರಾಜ್ಯ ಆಯುಕ್ತರುಗಳಾದ ಶ್ರೀ ಎಂ. ಎ. ಖಾಲಿದ್, ಶ್ರೀಮತಿ ಗೀತನಟರಾಜ್ ಜಿಲ್ಲಾ ಪದಾಧಿಕಾರಿಗಳು ಹಾಗೂ ಇತರರರನ್ನು ಕಾಣಬಹುದು.



ಕೊಪ್ಪಳ ಜಿಲ್ಲೆ ಗಂಗಾವತಿ ಸ್ಥಳಿಯ ಸಂಸ್ಥೆ ಆಶ್ರಯದಲ್ಲಿ ಇತ್ತೀಚೆಗೆ ನೆಡೆದ ಸ್ಕೌಟ್-ಗೈಡ್ ಮೇಳದ ಸಂದರ್ಭದಲ್ಲಿ ಶ್ರೀ ಮಲ್ಲಣ್ಣಗೌಡರನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಸನ್ಮಾನಿಸುತ್ತಿರುವುದು. ವಿಧಾನ ಪರಿಷತ್ ಸದಸ್ಯರಾದ ಶ್ರೀ ಶರಣಪ್ಪ ಮಂಟೂರ, ರಾಜ್ಯ ಸಂಸ್ಥೆ ಉಪಾಧ್ಯಕ್ಷ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಹೆಚ್.ಎನ್. ಸಿದ್ಧರಾಮಸ್ವಾಮಿ ಚಿತ್ರದಲ್ಲಿದ್ದಾರೆ.



21.11.2014ರಂದು ಗುಲ್ಬರ್ಗದಲ್ಲಿ ಜರುಗಿದ ಜಿಲ್ಲಾ ಮಟ್ಟದ ಪೆಟ್ರೋಲ್ ಲೀಡರ್ ಕ್ಯಾಂಪ್ ಹಾಗೂ ವಿಭಾಗ ಮಟ್ಟದ ಬುಲ್‌ಬುಲ್ ಬ್ಯಾಡ್ಜ್‌ವರ್ಕ ಕ್ಯಾಂಪ್ ಉದ್ಘಾಟನಾ ಸಮಾರಂಭದಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಇವರನ್ನು ಸನ್ಮಾನಿಸಲಾಯಿತು. ಚಿತ್ರದಲ್ಲಿ ಡಾ. ಬಸವರಾಜ ಪಾಟೀಲ ಸೇಡಂ. ರಾಜ್ಯಸಭಾ ಸದಸ್ಯರು, ಶ್ರೀ ನಾಗರೆಡ್ಡಿ ಪಾಟೀಲ್ ಹಾಗೂ ಇತರರರನ್ನು ಕಾಣಬಹುದು.

Regd. as News Paper (Magazine) RNI No : 13348/1959. Postal Regd. No KA/BGW-549/2012-2014
Licensed to post without prepayment License No.: WPP-87.
Posted at: Mail Business Centre, Bangalore GPO on 9th January 2015 (No. of Pages : 4+20=24)

ದಿನಾಂಕ 11.12.2014ರಂದು ಶಾಂತಿಗೃಹದ ಸಭಾಭವನದಲ್ಲಿ ನಡೆದ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ
ಉದ್ಘಾಟನಾ ಸಮಾರಂಭದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳ ವಿಹಂಗಮ ನೋಟ





ಸ್ವಚ್ಛ ಭಾರತ ಅಭಿಯಾನದಲ್ಲಿ ಭಾಗವಹಿಸಿದ ವಿವಿಧ ಜಿಲ್ಲೆಗಳ ಸ್ಕೌಟ್ಸ್-ಗೈಡ್ಸ್‌ಗಳು





ರಾಯಚೂರು



ಚಿಕ್ಕಮಗಳೂರು



ಕೊಡಗು





SCOUTS
Creating a Better World

**If not delivered, please return to :**
THE EDITOR, Karnataka Scout & Guide
State Headquarters, Shanthi Gruha
#39, Palace Road, Bangalore - 560 001.
Ph.: 080-22260017 e-mail.: shq@scout.org.in

**Published by : The Bharat Scouts & Guides, Karnataka, State Headquarters**
**Shanthi Gruha, #39, Palace Road, Bangalore - 560 001. Publisher & Editor : M.A. Khalid**
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bangalore 26